*'Sanghada Kate'*. 'Story of R.S.S.' [Kannada] : A brief history of Rashtriya Swayamsevak Sangh, depicting its birth, growth and various activities. Published by : Rashtra Jagarana Abhiyana Samiti, Bangalore.

Pages : 32 Price : Rs. 4-00 First Edition : 2000

**ರಾಷ್ಟ್ರ ಜಾಗರಣ ಅಭಿಯಾನ ಸಮಿತಿ**
ಕೇಶವ ಶಿಲ್ಪ
ಕೆಂಪೇಗೌಡನಗರ
ಬೆಂಗಳೂರು - 560 019

ಪುಟಗಳು : 32

**ಬೆಲೆ : ರೂ. 4-00**

ಮುದ್ರಕರು : ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು - 560 019

# ಸಂಘದ ಕತೆ

ನಿಮಗಿಂದು ಸಂಘದ ಕತೆಯನ್ನು ಹೇಳುವೆ. ಈ ಕತೆ ನಿಮಗೆಲ್ಲಾ ಚೆನ್ನಾಗಿ ಒಪ್ಪಿಗೆಯಾಗಬಹುದು ಎಂದು ನನ್ನ ಅನಿಸಿಕೆ. ಏಕೆಂದರೆ ಈ ಕತೆ ನಿಮಗೆ, ನಮಗೆ, ಎಲ್ಲರಿಗೂ ಸಂಬಂಧಿಸಿದುದು.

ಸಂಘದ ಪೂರ್ಣ ಹೆಸರು 'ರಾಷ್ಟ್ರೀಯ ಸ್ವಯಂಸೇವಕ ಸಂಘ' ಎಂದು. ಆದರೆ ಎಲ್ಲರೂ ಹೇಳುವಂತೆ ಆರ್.ಎಸ್.ಎಸ್. ಎಂಬ ಹೆಸರಿನಿಂದಲೇ ಅದು ಹೆಚ್ಚು ಪರಿಚಿತ. ಈ ಮೂರು ಶಬ್ದಗಳ ಅರ್ಥವೇನು? ತಿಳಿಯುವುದು ಬಹಳ ಸುಲಭ. ಈ ನಮ್ಮ ರಾಷ್ಟ್ರ ಇದೆಯಲ್ಲ - ಭಾರತ, ಇದರ ಸೇವೆಯನ್ನು ನಿಃಸ್ವಾರ್ಥ ಭಾವನೆಯಿಂದ ಮಾಡಲು ಸ್ವಂತದ ಪ್ರೇರಣೆಯಿಂದ ತೊಡಗಿರುವವರು - ಎಂದರೆ ಸ್ವಯಂಸೇವಕರು, ಅವರೆಲ್ಲರ ಸಂಘಟನೆಯಿದು - ಎಂದರೆ ಸಂಘ. 1925 ಸೆಪ್ಟೆಂಬರ್ 25ರ ವಿಜಯದಶಮಿಯ ಹಬ್ಬದ ದಿನ ನಾಗಪುರದಲ್ಲಿ ಈ ಸಂಘದ ಶುಭಾರಂಭವಾಯಿತು.

ಈ ಸಂಘಟನೆಯ ಸಂಸ್ಥಾಪಕರ ಹೆಸರು - ಡಾ|| ಕೇಶವ ಬಲಿರಾಮ ಹೆಡಗೇವಾರ್ ಎಂದು. ಅವರ ಹುಟ್ಟು ನಾಗಪುರದ ಒಂದು ಪುರೋಹಿತ ಕುಟುಂಬದಲ್ಲಾಯಿತು. ಹಿಂದು ಪಂಚಾಂಗದಂತೆ ಅದು ಸರಿಯಾಗಿ ವರ್ಷಾರಂಭದ ದಿನ - ಯುಗಾದಿ. 1889 ಏಪ್ರಿಲ್ 1.

## ಬಾಲ್ಯದಿಂದಲೂ ದೇಶಭಕ್ತ

ಅವರು ಇನ್ನೂ ಸಣ್ಣವರಾಗಿದ್ದಾಗಲೇ ಅವರ ತಂದೆ, ತಾಯಿ ಇಬ್ಬರೂ ಒಂದೇ ದಿನ ಪ್ಲೇಗ್ ರೋಗಕ್ಕೆ ತುತ್ತಾಗಿ ಮರಣಹೊಂದಿದರು. ಅವರ ಹಿರಿಯಣ್ಣನೇ ಕುಟುಂಬದ ಪಾಲನೆ ಮಾಡಿದ.

ಕೇಶವ ಪ್ರಾಥಮಿಕ ಶಾಲೆ ಓದುತ್ತಿದ್ದಾಗಿನ ಒಂದು ಪ್ರಸಂಗ. 1897ರಲ್ಲಿ ಇಂಗ್ಲೆಂಡಿನ ರಾಣಿ ವಿಕ್ಟೋರಿಯಾಗೆ ಪಟ್ಟಾಭಿಷೇಕವಾಗಿ ಅರವತ್ತು ವರ್ಷಗಳು ಕಳೆದಿದ್ದವು. ಅದರ ಸಂತೋಷದ ಸಲುವಾಗಿ ಶಾಲೆಯಲ್ಲಿ ಮಕ್ಕಳಿಗೆಲ್ಲ ಮಿಠಾಯಿ ಹಂಚಲಾಗಿತ್ತು. ತನ್ನ ಕೈಗೆ ಬಂದ ಮಿಠಾಯಿಯನ್ನು ಕೇಶವ ಕಸದ ಬುಟ್ಟಿಗೆ ಎಸೆದ. ಪುನಃ 1901ರಲ್ಲಿ ಏಳನೇ ಎಡ್ವರ್ಡ್‌ನ ರಾಜ್ಯಾಭಿಷೇಕದ ದಿನ. ಎಲ್ಲೆಲ್ಲೂ ಪಟಾಕಿ, ಸುಡುಮದ್ದುಗಳ ಸಂಭ್ರಮ ನಡೆದಿತ್ತು. ಆದರೆ ಅಂದು ಸಹ ಕೇಶವ ದುಃಖಿತನಾಗಿ ಮನೆಯಲ್ಲೆ ಉಳಿದಿದ್ದ. ಏಕೆಂದು ಅವನನ್ನು ಕೇಳಿದಾಗ - 'ಈ ರಾಜ, ರಾಣಿಯರೆಲ್ಲ ವಿದೇಶೀಯರು. ನಮ್ಮವರಲ್ಲ. ಅವರ ಸಮಾರಂಭಗಳಲ್ಲಿ ನಾವೇಕೆ ಭಾಗವಹಿಸಬೇಕು?' ಎಂದು ಪ್ರಶ್ನಿಸಿದ. ಅಮ್ಮನ ಎದೆಹಾಲಿನೊಂದಿಗೆ ಆತ ದೇಶಭಕ್ತಿಯ ಅಮೃತವನ್ನು ಕುಡಿದಿದ್ದನೇನೋ ಅನಿಸುತ್ತದೆ.

ಮಾಧ್ಯಮಿಕ ಶಾಲೆಗೆ ಹೋಗಲಾರಂಭಿಸಿದ ಮೇಲೆ ಕೇಶವ ಜತೆಗಾರ ವಿದ್ಯಾರ್ಥಿಗಳ ಮನದಲ್ಲೂ ಸ್ವಾತಂತ್ರ್ಯದ ಜ್ಯೋತಿಯನ್ನು ಹಚ್ಚಲಾರಂಭಿಸಿದ. ಪರಿಣಾಮವಾಗಿ 1905ರಲ್ಲಿ 'ವಂದೇ ಮಾತರಂ' ಜನಾಂದೋಲನದಲ್ಲಿ ಅವನ ಶಾಲೆಯಲ್ಲೂ ಆ ರಣಘೋಷ ಮೊಳಗಿತು. ಈ ಕಾರಣಕ್ಕಾಗಿ ಆತ ಶಾಲೆಯಿಂದ ವಜಾ ಶಿಕ್ಷೆಗೊಳಗಾದ. ಆತ ನಾಗಪುರದ ಹೊರಗಿನ ಶಾಲೆಯೊಂದನ್ನು ಸೇರಿ ಅಲ್ಲಿ ತನ್ನ ಮೆಟ್ರಿಕ್ ಶಿಕ್ಷಣವನ್ನು ಪೂರೈಸಿದ.

ಕೆಲವು ಹಿರಿಯ ದೇಶಭಕ್ತರ ನೆರವಿನಿಂದ ಕೇಶವರಾವ್ ವೈದ್ಯಕೀಯ ಶಿಕ್ಷಣಕ್ಕಾಗಿ ನಾಗಪುರದಿಂದ ಕಲ್ಕತ್ತಾಗೆ ಹೋದರು. ಅವರೇಕೆ ಅಷ್ಟು ದೂರ ಹೋಗಬೇಕಾಗಿತ್ತು ಎಂಬ ಪ್ರಶ್ನೆ ನಿಮ್ಮ ಮನದಲ್ಲೆದ್ದಿರಬಹುದು. ನಿಜ ಹೇಳಬೇಕೆಂದರೆ ಅವರಿಗೆ ಓದು ಒಂದು ನೆಪಮಾತ್ರವಾಗಿತ್ತು. ಆ ದಿನಗಳಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ, ಸಾವಿಗೂ ಅಂಜದೆ ಹೋರಾಡುತ್ತಿದ್ದ ಕ್ರಾಂತಿಕಾರಿಗಳಿಗೆಲ್ಲ ಕಲ್ಕತ್ತ ಒಂದು ತಾಣವೇ ಆಗಿತ್ತು. ಕೇಶವರಾವ್ ಈ ಚಟುವಟಿಕೆಗಳನ್ನು ಕಲಿಯಲು ಮತ್ತು ಅದರಲ್ಲಿ ಪಾಲ್ಗೊಳ್ಳಲು ಸಹ ಆರಂಭಿಸಿದರು.

ವೈದ್ಯಕೀಯ ಪದವಿ ಗಳಿಸಿ 1916ರಲ್ಲಿ ಅವರು ನಾಗಪುರಕ್ಕೇನೋ ಬಂದರು. ಆದರೆ ವೈದ್ಯಕೀಯ ವೃತ್ತಿಯನ್ನು ಆರಂಭಿಸಲಿಲ್ಲ. ಮದುವೆಯನ್ನೂ ಮಾಡಿಕೊಳ್ಳಲಿಲ್ಲ. ಜನರು ಅವರನ್ನು ಕೇಳುತ್ತಿದ್ದರು: 'ನಿಮ್ಮ ಸ್ವಂತದ ಕುಟುಂಬ ಇಷ್ಟೊಂದು ಬಡತನದಲ್ಲಿದ್ದರೂ ನೀವೇಕೆ ಹೀಗೆ?' ಆಗ ಡಾಕ್ಟರ್ ಹೆಡಗೇವಾರ್ 'ನನ್ನ ಬಳಿ ಸಮಯವಿಲ್ಲ' ಎಂದು ಉತ್ತರಿಸುತ್ತಿದ್ದರು. ದೇಶದ ಸ್ವಾತಂತ್ರ್ಯದ ಗಳಿಕೆಗಾಗಿ ಅವರ ಒಂದೊಂದು ಉಸಿರು ಸಹ ಸಮರ್ಪಿತವಾಗಿತ್ತು. ಬೇರೆಲ್ಲ ಕೆಲಸಗಳಿಗೆ ಅವರ ಬಳಿ ಸಮಯವಿರುವುದಾದರೂ ಹೇಗೆ ಸಾಧ್ಯ? ನಾಗಪುರದಲ್ಲಿದ್ದುಕೊಂಡೇ ವಿದರ್ಭ ಪ್ರಾಂತದಲ್ಲೆಲ್ಲ ಅವರು ಅನೇಕ ವಿಧ ಜನಜಾಗೃತಿಯ ಕೆಲಸಗಳನ್ನು ಆರಂಭಿಸಿದರು. ಗಾಂಧೀಜಿಯವರ ಮುಂದಾಳುತನದ ಸತ್ಯಾಗ್ರಹದಲ್ಲೂ ಎರಡು ಬಾರಿ - 1920 ಮತ್ತು 1931ರಲ್ಲಿ ಪೂರಾ ಧುಮುಕಿ ಸೆರೆಮನೆವಾಸವನ್ನೂ ಅನುಭವಿಸಿದರು. ಪತ್ರಿಕೆ ನಡೆಸುವುದು, ರಾಷ್ಟ್ರೀಯ ಉತ್ಸವಗಳಲ್ಲಿ ಪಾಲ್ಗೊಳ್ಳುವುದು, ಇನ್ನೂ ಹಲವು ವಿಧ ಜನಾಂದೋಲನಗಳಲ್ಲೂ ಪಾಲ್ಗೊಂಡ ಅವರು ಅನೇಕ ರೀತಿಯ ಕೆಲಸಗಳಲ್ಲಿ ಸದಾ ಸಕ್ರಿಯರಾಗಿರುತ್ತಿದ್ದರು.

ಸಂಘದ ಸ್ಥಾಪನೆಯಾದುದು ಇಂತಹವರಿಂದ. ಇದನ್ನು ನೀವು ಚೆನ್ನಾಗಿ ನೆನಪಿರಿಸಿಕೊಳ್ಳುವುದು ಅಗತ್ಯ. ಯಾಕೆಂದರೆ, ಸಂಘದ ಆರಂಭದಿಂದ ಇಂದಿನವರೆಗೆ ಅದರ ಸತತವಾದ ಬೆಳವಣಿಗೆಯ ಕತೆಯ ಸೂತ್ರ ಅಡಕವಾಗಿರುವುದು ಇದರಲ್ಲಿ. ಸಂಘವು ಬೆಳೆಯುತ್ತ ಬಂದಂತೆ, ಅದರ ಪ್ರತಿಯೊಂದು ಹೆಜ್ಜೆಯೂ ರಾಷ್ಟ್ರದ ಕೆಲಸದ ಹಲವಾರು ಮುಖಗಳಲ್ಲಿ ಹೇಗೆ ವಿಸ್ತರಿತವಾಯಿತೆಂಬುದರ ರೋಮಾಂಚಕ ಪ್ರಸಂಗಗಳು ಮುಂದೆ ನಿಮಗೆ ತಿಳಿಯಲಿವೆ.

## ಸಂಘದ ಸ್ಥಾಪನೆಯಾದುದು ಏಕೆ?

ದೇಶದ ಸಲುವಾಗಿ ಇಷ್ಟೊಂದು ವಿಧದ ಕೆಲಸಗಳಲ್ಲಿ ಸದಾ ನಿರತರಾಗಿದ್ದ ಡಾ॥ ಹೆಡಗೇವಾರ್‌ರಿಗೆ 'ರಾಷ್ಟ್ರೀಯ ಸ್ವಯಂಸೇವಕ ಸಂಘ' ದಂತಹ ಪ್ರತ್ಯೇಕ ಸಂಘಟನೆಯೊಂದನ್ನು ಆರಂಭಿಸಬೇಕೆಂಬ ಕಲ್ಪನೆ ಹೇಗೆ ಬಂತು ಎಂಬ ಪ್ರಶ್ನೆ ನಿಮ್ಮ ಮನದಲ್ಲೆದ್ದಿರಬಹುದು. ವಾರ್ಧಾದಲ್ಲಿ 1934ರಲ್ಲಿ ಡಾಕ್ಟರ್ ಹೆಡಗೇವಾರ್‌ರೊಂದಿಗೆ ಭೇಟಿಯಾದಾಗ ಗಾಂಧೀಜಿಯವರೂ ಇದೇ ಪ್ರಶ್ನೆಯನ್ನು ಅವರಿಗೆ ಕೇಳಿದ್ದರು. 'ಕಾಂಗ್ರೆಸ್‌ನಲ್ಲಿದ್ದುಕೊಂಡೇ ನೀವು ಸ್ವಯಂಸೇವಕರ ದಳವನ್ನೇಕೆ ಕಟ್ಟಲಿಲ್ಲ? ಪ್ರತ್ಯೇಕವಾಗಿ ಏಕೆ ಆರಂಭಿಸಿದಿರಿ?' ಎಂಬ ಅವರ ಪ್ರಶ್ನೆಗೆ ಡಾಕ್ಟರ್ ಹೆಡಗೇವಾರರು "ಸ್ವಯಂಸೇವಕನಿಗೆ ಸಂಬಂಧಿಸಿದಂತೆ ನನ್ನ ಕಲ್ಪನೆಯೇ ಬೇರೆ. ಸ್ವಾರ್ಥ ಬಿಟ್ಟು ದೇಶಕ್ಕಾಗಿ ಸ್ವತಃ ಮುಂದಾಗಿ ಕೆಲಸ ಮಾಡುವವರನ್ನು ತಯಾರು ಮಾಡಬೇಕೆಂಬುದು ನನ್ನ ಇಚ್ಛೆ. ಆದರೆ ಈ ಕೆಲಸ ರಾಜಕೀಯ ಪಕ್ಷದ ಒಂದು ಭಾಗವಾಗಿದ್ದು ಮಾಡಲು ಎಂದೂ ಸಾಧ್ಯವಿಲ್ಲ" ಎಂದು ಉತ್ತರಿಸಿದ್ದರು. ಮಾತು ಮುಂದುವರಿಸುತ್ತಾ ಅವರು 'ಅಂತಹ ಸಮರ್ಪಿತ ಕಾರ್ಯಕರ್ತರ ಭರವಸೆಯ ಮೇಲೆಯೇ ರಾಷ್ಟ್ರದ ಎಲ್ಲ ಕ್ಷೇತ್ರಗಳ ಏಳ್ಗೆ ಸಾಧ್ಯ' ಎಂದೂ ತಿಳಿಸಿದ್ದರು. ಕೆಲವೊಮ್ಮೆ ಸ್ವಯಂಸೇವಕರೂ ಈ

ಕುರಿತು ಅವರನ್ನು ಪ್ರಶ್ನಿಸುತ್ತಿದ್ದರು. ಅವರಿಗೆಲ್ಲ ಡಾಕ್ಟರ್ ಹೆಡಗೇವಾರರು ಬೇರೊಂದು ವಿಧದಲ್ಲಿ ವಿವರಿಸುತ್ತಿದ್ದರು, 'ನೋಡಿ, ನಾವೀಗ ವಿದ್ಯುತ್ತಿನ ಉತ್ಪಾದನೆಯಲ್ಲಿ ತೊಡಗಿದ್ದೇವೆ. ಮುಂದೆ ದೇಶದ ಕಲ್ಯಾಣಕ್ಕಾಗಿ ಹಲವಾರು ವಿಧ ಕೆಲಸಗಳಿಗೆ ಶಕ್ತಿಯನ್ನು ಪೂರೈಸುವ ಕಾರ್ಯ ಇದರಿಂದ ಆಗಲಿದೆ.'

ಸಂಘದ ಸ್ಥಾಪನೆಯ ನಂತರ ಸುಮಾರು 15 ವರ್ಷಗಳ ಕಾಲ ಡಾಕ್ಟರ್ ಹೆಡಗೇವಾರರು ದೇಶಾದ್ಯಂತ ಇಂತಹ ಸ್ವಯಂಸೇವಕರನ್ನು ರೂಪಿಸುವ ಸಲುವಾಗಿ ದೂರದೂರದವರೆಗೆ ಪ್ರವಾಸ ಮಾಡುತ್ತಿದ್ದರು. ಜನರನ್ನು ಭೇಟಿಯಾಗಿ, ಅವರಿಗೆ ಸಂಘದ ಕೆಲಸದ ಬಗ್ಗೆ ತಿಳಿಸಿ ಹೇಳಲು ದಿನವೆಲ್ಲ ಓಡಾಡುತ್ತಿದ್ದರು. ರಾತ್ರಿ ನಿದ್ದೆಯನ್ನೂ ಮರೆತು ಸದಾ ಕೆಲಸದಲ್ಲಿ ಮಗ್ನರಾಗಿರುತ್ತಿದ್ದರು. ಹೀಗೆ ತನ್ನ ಶರೀರವನ್ನು ಅಕ್ಷರಶಃ ಶ್ರೀಗಂಧದಂತೆ ತೇದು ತೇದು, ಸಂಘದ ಸುಗಂಧವನ್ನು ದೂರದೂರದವರೆಗೆ ಹರಡಿದರು. ಕೊನೆಗೊಮ್ಮೆ 1940ರಲ್ಲಿ ರಾಷ್ಟ್ರಕಾರ್ಯದ ಈ ಯಜ್ಞಕುಂಡದಲ್ಲಿ ತನ್ನ ಪ್ರಾಣದಾಹುತಿಯನ್ನು ನೀಡಿದರು.

### ಶಾಖೆ – ಸ್ವಯಂಸೇವಕರ ನಿರ್ಮಾಣದ ಕೇಂದ್ರ

ಇಂತಹ ಅದ್ಭುತ ಕಲ್ಪನೆಗನುಗುಣವಾಗಿ ಸ್ವಯಂಸೇವಕರನ್ನು ರೂಪಿಸಲು ಡಾಕ್ಟರ್ ಹೆಡಗೇವಾರರು ಯಾವ ಪದ್ಧತಿಯನ್ನು ಅನುಸರಿಸಿದರು ಎಂಬುದನ್ನು ತಿಳಿಯಲು ಪ್ರಾಯಶಃ ನೀವು ಬಯಸುತ್ತಿರಬಹುದು. ಅದರ ಹೆಸರು ಶಾಖೆ ಎಂದು. ನಿಮ್ಮಲ್ಲೂ ಕೆಲವರು ಅದನ್ನು ಕಂಡಿರಬಹುದು. ಕಾವಿಯ ಬಣ್ಣದ ಭಗವಾಧ್ವಜದ ಮುಂದೆ ಬಾಲಕರು, ತರುಣರು ಅಥವಾ ವಯಸ್ಕರು ಒಂದಾಗಿ ಬರುತ್ತಾರೆ. ವಿವಿಧ ರೀತಿಯ ಸ್ವದೇಶಿ ಆಟಗಳನ್ನು ಆಡುತ್ತಾರೆ. ಸೂರ್ಯನಮಸ್ಕಾರ, ಆಸನ, ವ್ಯಾಯಾಮ ಇತ್ಯಾದಿ ಮಾಡುತ್ತಾರೆ. ದೇಶಭಕ್ತಿಯ ಹಾಡುಗಳನ್ನು ಹಾಡುತ್ತಾರೆ. ಕೆಲವೊಮ್ಮೆ ದೇಶದ ಮಹಾಪುರುಷರ ಜೀವನ ಮತ್ತು ವಿಚಾರಗಳನ್ನು ಭಾಷಣ ಅಥವಾ ಚರ್ಚೆಗಳ ರೂಪದಲ್ಲಿ ಅವರಿಗೆ ತಿಳಿಸಲಾಗುತ್ತದೆ. ಕೊನೆಯಲ್ಲಿ ಧ್ವಜದ ಮುಂದೆ ಸಾಲಾಗಿ ನಿಂತು ಸ್ವಯಂಸೇವಕರು ಪ್ರಾರ್ಥನೆ ಮಾಡುತ್ತಾರೆ. ಪ್ರಾರ್ಥನೆಯಲ್ಲಿ ಭಾರತ ಮಾತೆಯನ್ನು ವಂದಿಸುತ್ತಾರೆ ಮತ್ತು ಆಕೆಯ ಸೇವೆ ಮಾಡುವ ಸಲುವಾಗಿ ಭಗವಂತನಲ್ಲಿ ಶಕ್ತಿ, ಶೀಲ, ಜ್ಞಾನ ಮೊದಲಾದ ಗುಣಗಳನ್ನು ಬೇಡುತ್ತಾರೆ. ಈ ಕಾರ್ಯಕ್ರಮ ಪ್ರತಿದಿನ ನಿಶ್ಚಿತವಾದ ಒಂದು ಸ್ಥಾನದಲ್ಲಿ ಅದೇ ಸಮಯದಲ್ಲಿ ನಡೆಯುತ್ತದೆ. ಅದರಲ್ಲಿ ಭಾಗವಹಿಸುವವರ ಅನುಕೂಲಕ್ಕೆ ತಕ್ಕಂತೆ ಬೆಳಿಗ್ಗೆ, ಸಂಜೆ ಅಥವಾ ರಾತ್ರಿ ಬೇರೆ ಬೇರೆ ಸಮಯಗಳಲ್ಲೂ ಶಾಖೆ ಆಗಬಹುದು. ಶಾಖೆಯನ್ನು ಯಾರೇ ನೋಡಲಿ, ಅಲ್ಲಿನ ಶಿಸ್ತನ್ನು ಕಂಡು ಅವರಿಗೆ ಆನಂದವಾಗುತ್ತದೆ. ಶಾಖೆ ಮುಗಿದ ನಂತರ ಸ್ವಯಂಸೇವಕರು ಪ್ರೀತಿಯಿಂದ ಹರಟುತ್ತಾ ಹೊಸ ಹೊಸ ವ್ಯಕ್ತಿಗಳನ್ನು ಕಾಣಲು ಹೋಗುತ್ತಾರೆ.

ಸಂಘದ ಆರಂಭದ ದಿನಗಳಲ್ಲಿ ಶಾಖೆಗಳಿಗೆ ಕೇವಲ ಬಾಲಕರು, ತರುಣರು, ವಿದ್ಯಾರ್ಥಿಗಳೇ ಬರುತ್ತಿದ್ದರು. ಆಗ ಜನರು ಕೇಳುತ್ತಿದ್ದುದುಂಟು: 'ಇಂತಹ ಕಾರ್ಯಕ್ರಮ ನಡೆಸಿದ ಮಾತ್ರದಿಂದ ದೇಶದ ಕೆಲಸವಾಗುವುದೇ?' ಎಂದು. ಕೆಲವರಂತೂ ಇದರ ಲೇವಡಿ ಮಾಡುತ್ತಿದ್ದುದೂ ಉಂಟು. ಆದರೆ ಈಗ ದೇಶಾದ್ಯಂತ ಹೆಚ್ಚಿನವರಿಗೆ ಶಾಖೆಯ ಮಹಿಮೆ ಏನು, ಅದರಲ್ಲಿ ಸಂಸ್ಕಾರ ಪಡೆಯುವ ಸ್ವಯಂಸೇವಕರು ಎಂತಹವರು, ಅವರು ದೇಶಕ್ಕಾಗಿ ಎಂತೆಂತಹ ರೀತಿಯ ಕೆಲಸಗಳನ್ನು ನಡೆಸುತ್ತಿದ್ದಾರೆ, ಇತ್ಯಾದಿ ಎಲ್ಲವೂ ಅರಿವಾಗಿದೆ.

ಪ್ರಾಯಶಃ ನೀವು ಸಹ ಕೆಲವು ಕಡೆಗಳಲ್ಲಿ ಸಂಘದ ಸ್ವಯಂಸೇವಕರು ಬಡವರು ಮತ್ತು ಹಿಂದುಳಿದವರ ವಸತಿ ಪ್ರದೇಶಗಳಿಗೆ (ಅವುಗಳನ್ನು ಸೇವಾಬಸ್ತಿಗಳು ಎನ್ನಲಾಗುತ್ತದೆ)

ಹೋಗುವುದು, ಅಲ್ಲಿ ಮಕ್ಕಳಿಗೆ ಅಕ್ಷರಾಭ್ಯಾಸ (ಓದು ಬರಹ) ಮಾಡಿಸುವುದು, ತಮ್ಮ ಶರೀರವನ್ನು ಶುಚಿಯಾಗಿ, ಚೊಕ್ಕಟವಾಗಿರಿಸಲು ಕಲಿಸುವುದು, ಹಿರಿಯರಿಗೆ ಕಾಲು ಮುಟ್ಟಿ ನಮಸ್ಕರಿಸುವುದು, ಅವರ ಸೇವೆ ಮಾಡುವುದು, ಸತ್ಯ ಮಾತಾಡುವುದು, ಮರಗಳು ಹಕ್ಕಿಗಳು ಇವುಗಳನ್ನು ಪ್ರೀತಿಸುವುದು ಇತ್ಯಾದಿ ಸಂಗತಿಗಳನ್ನು ಸಣ್ಣಸಣ್ಣ ಕತೆಗಳ ಮೂಲಕ ವಿವರಿಸುವುದು, ಇತ್ಯಾದಿ ನೋಡಿರಬಹುದು. ಕೆಲವು ಸೇವಾಬಸ್ತಿಗಳಲ್ಲಿ ಸೋದರಿಯರಿಗೆ ಹೊಲಿಗೆ ಕಲಿಸಲು ಶಿಕ್ಷಕಿಯರನ್ನು ಕಳುಹಿಸಲಾಗುತ್ತಿದೆ, ಅದಕ್ಕಾಗಿ ಅಗತ್ಯವಿರುವ ಹೊಲಿಗೆಯಂತ್ರಗಳನ್ನು ಒದಗಿಸಲಾಗುತ್ತಿದೆ, ಕೆಲವು ಕಡೆಗಳಲ್ಲಂತೂ ದೊಡ್ಡ ಪ್ರಮಾಣದಲ್ಲಿ ಆಸ್ಪತ್ರೆಗಳನ್ನೂ ನಡೆಸಲಾಗುತ್ತಿದೆ. ಶಿಕ್ಷಣಕ್ಕಾಗಿ ಏನೂ ವ್ಯವಸ್ಥೆಯೂ ಇಲ್ಲದ ದೂರದೂರದ ವನವಾಸಿ ಗ್ರಾಮಗಳಲ್ಲಿ 6000 ಏಕಲ ವಿದ್ಯಾಲಯ (ಏಕೋಪಾಧ್ಯಾಯ ಶಾಲೆ)ಗಳನ್ನು ನಡೆಸಲಾಗುತ್ತಿದೆ. ಸೇವಾ ಬಸ್ತಿಯ ಮತ್ತು ವನವಾಸಿ ಮಕ್ಕಳಿಗಾಗಿ ವಿದ್ಯಾರ್ಥಿನಿಲಯಗಳನ್ನು ನಡೆಸಲಾಗುತ್ತಿದೆ. ಈ ರೀತಿ ದೇಶಾದ್ಯಂತ ಸುಮಾರು 29 ಸಾವಿರ ಸೇವಾ ಕಾರ್ಯಗಳು ನಡೆಯುತ್ತಿವೆ.

## ಸೇವಾ ಕಾರ್ಯಗಳ ವಿಶೇಷತೆ

ಈ ಸೇವಾ ಕಾರ್ಯಗಳಲ್ಲಿ ವಿಶೇಷತೆಗಳೇನಾದರೂ ಇವೆಯೇ ಎಂದು ಕೇಳಲು ನೀವು ಬಯಸಬಹುದು. ಇವೆ, ಖಂಡಿತವಾಗಿಯೂ ಇವೆ. ಮೊಟ್ಟಮೊದಲು ನಿಮ್ಮ ಮನದಲ್ಲಿ ಎದ್ದಿರಬಹುದಾದ ಪ್ರಶ್ನೆಯೆಂದರೆ, ಇಷ್ಟೊಂದು, ಭಾರೀ ಪ್ರಮಾಣದಲ್ಲಿ ಸೇವಾ ಕಾರ್ಯಗಳನ್ನು ನಡೆಸುತ್ತಿದ್ದೀರಲ್ಲ, ಅದಕ್ಕೆಲ್ಲ ಪ್ರತಿವರ್ಷವೂ ಕೋಟ್ಯಾಂತರ ರೂಪಾಯಿಗಳ ವೆಚ್ಚವಾಗುತ್ತಿರಬಹುದು. ಈ ಹಣ ಎಲ್ಲಿಂದ ಬರುತ್ತದೆ? ಒಂದಿಷ್ಟು ಪ್ರಮಾಣದಲ್ಲಿ ಸಂಘ ಹಿತೈಷಿ ಶ್ರೀಮಂತರಿಂದ, ವಿದೇಶಗಳಲ್ಲಿರುವ ಸಂಘದ ಸ್ವಯಂಸೇವಕರಿಂದ ಮತ್ತು ನಮ್ಮ ಸರಕಾರದ ವತಿಯಿಂದಲೂ ಅಷ್ಟಿಷ್ಟು ಸಹಾಯಧನ ಲಭಿಸುತ್ತಿದೆ. ಆದರೆ ಅದೆಲ್ಲವೂ ಸೇರಿದರೂ ಒಟ್ಟು ವೆಚ್ಚದ ಐದು ಶೇಕಡಕ್ಕಿಂತ ಹೆಚ್ಚಾಗುವುದಿಲ್ಲ. ಹಾಗಾದಲ್ಲಿ ಇನ್ನುಳಿದ ಖರ್ಚಿಗೆ ಹಣ ಎಲ್ಲಿಂದ? ಸಮಾಜದಲ್ಲಿನ ಲಕ್ಷಾಂತರ ಸರ್ವಸಾಮಾನ್ಯ ಜನರಿಂದಲೇ ಸಂಗ್ರಹಿಸಿ ಇದೆಲ್ಲವನ್ನೂ ನಿಭಾಯಿಸಲಾಗುತ್ತದೆ. ಈಗ ಪ್ರಶ್ನೆ ಏಳುತ್ತದೆ, ಸರ್ವ ಸಾಮಾನ್ಯ ಜನರಿಗೆ ಇವೆಲ್ಲ ಸೇವಾ ಕಾರ್ಯಗಳನ್ನು ನಿಭಾಯಿಸುವುದು ತಮ್ಮದೇ ಕರ್ತವ್ಯವೆಂದು ಏಕೆ ಅನಿಸುತ್ತದೆ?

ಮೊಟ್ಟಮೊದಲನೆಯದಾಗಿ ಸಂಘದ ಸ್ವಯಂಸೇವಕರು ಅವರಿಗೆ ಎಲ್ಲವನ್ನು ವಿವರಿಸುತ್ತಾರೆ. "ನೋಡಪ್ಪ, ನಿನಗೊಂದು ಕುಟುಂಬವಿರುವಂತೆ, ನಮ್ಮ ಸಮಾಜವೂ ಒಂದು ದೊಡ್ಡ ಕುಟುಂಬವೇ. ನಮಗೆಲ್ಲ ಇರುವವಳು ಒಬ್ಬಳೇ ತಾಯಿ ಭಾರತ ಮಾತೆ. ನಮ್ಮ ಪರಿವಾರದ ಪ್ರತಿಯೊಬ್ಬನ ಬಗ್ಗೆ ನಾವು ಚಿಂತೆ ಮಾಡುವಂತೆ ನಮ್ಮ ಸಮಾಜದ ಬಗ್ಗೆ ಚಿಂತೆ ಮಾಡಬೇಕಾದುದೂ ನಮ್ಮ ಧರ್ಮವೇ." ಇನ್ನೊಂದು ಮಹತ್ವದ ಸಂಗತಿ ಎಂದರೆ ಜನರಿಗೆ ಸಂಘದ ಸ್ವಯಂಸೇವಕರ ಪ್ರಾಮಾಣಿಕತೆಯಲ್ಲಿ ಪೂರ್ಣವಾಗಿ ವಿಶ್ವಾಸವಿದೆ. ಇವರು ಒಂದೊಂದು ಚಿಕ್ಕಾಸಿನ ಬಳಕೆಯನ್ನೂ ಸರಿಯಾಗಿಯೇ ಮಾಡುತ್ತಾರೆ. ಅದರ ಲೆಕ್ಕಾಚಾರವನ್ನು ಬರೆದಿಡುತ್ತಾರೆ. ಸಾಮಾನ್ಯ ಜನರಿಗಷ್ಟೇ ಅಲ್ಲ, ಬೇರೆ ಬೇರೆ ಸಂಸ್ಥೆಗಳಿಗೂ ಸಂಘದ ಮೇಲೆ ಪೂರಾ ವಿಶ್ವಾಸವಿದೆ. ಅದಕ್ಕಾಗಿ ದೇಶದಲ್ಲಿ ಎಂದಾದರೂ ನೈಸರ್ಗಿಕ ಅಥವಾ ಮಾನವನ ಕಾರಣದಿಂದಲೇ ಆಗಿರುವ ಆಪತ್ತುಗಳಲ್ಲೂ, ಅನೇಕ ಸಂಸ್ಥೆಗಳು ತಾವು ಸಂಗ್ರಹಿಸಿರುವ ಹಣ, ವಸ್ತ್ರ, ಕಂಬಳಿ ಇತ್ಯಾದಿ ಎಲ್ಲವನ್ನೂ ಸ್ವಯಂಸೇವಕರ ಮೂಲಕವೇ ಪೀಡಿತ ಜನರಿಗೆ ಹಂಚಲು ಇಷ್ಟಪಡುತ್ತವೆ. ಕಳೆದ ವರ್ಷ ಒರಿಸ್ಸಾದ ಕರಾವಳಿ ಜಿಲ್ಲೆಗಳಲ್ಲಿ ಮಹಾವಿನಾಶಕಾರಿ ಚಂಡಮಾರುತ ಬೀಸಿತು. ಅದರ ಎರಡು ಮೂರು ವರ್ಷಗಳ ಮೊದಲು ಅಲ್ಲಿ ಭೀಕರ ಬರಗಾಲ ಬಂದಿತ್ತು. ಎರಡೂ ಪ್ರಸಂಗಗಳಲ್ಲಿ ಗುಜರಾತಿನ ಭನಸಾಲಿ ಸೇವಾ ಟ್ರಸ್ಟ್ ಅಲ್ಲಿ ಪರಿಹಾರ ಮತ್ತು ಪುನರ್ವಸತಿಯ ಕಾರ್ಯಕ್ಕಾಗಿ ಕೋಟ್ಯಾಂತರ

ರೂಪಾಯಿಗಳ ಯೋಜನೆಯನ್ನು ತಯಾರಿಸಿತು. ಈ ಯೋಜನೆಗೆ ಕಾರ್ಯರೂಪ ಕೊಡುವ ಹೊಣೆಯನ್ನು ಅದು ಸ್ವಯಂಸೇವಕರಿಗೇ ಒಪ್ಪಿಸಿತು.

## ಜೆ.ಪಿ. ಅವರು ಬದಲಾದುದು ಹೇಗೆ?

ಈ ಸಂದರ್ಭದಲ್ಲಿ ಲೋಕನಾಯಕ ಜಯಪ್ರಕಾಶ ನಾರಾಯಣ ಅವರ ಒಂದು ಅನುಭವ ನಿಮಗೆ ಖಂಡಿತವಾಗಿಯೂ ರೋಚಕ ಎನಿಸಬಹುದು. ಅವರು ತಾನು ಕಟ್ಟಾ ಸಮಾಜವಾದಿ ಎಂದು ಅನಿಸಿಕೊಂಡಿದ್ದ ದಿನಗಳು ಅವು. ಆಗ ಅವರು ಸಂಘದ ಕಡು ವಿರೋಧಿಗಳಾಗಿದ್ದರು. 1965-66ರಲ್ಲಿ ಬಿಹಾರದಲ್ಲಿ ಭೀಕರ ಬರಗಾಲ ಆವರಿಸಿತ್ತು. ಪರಿಹಾರಕಾರ್ಯಗಳಿಗೆಲ್ಲ ಜಯಪ್ರಕಾಶ ನಾರಾಯಣಜಿ ಅವರೇ ಪ್ರಮುಖರಾಗಿದ್ದರು. ಈ ಕೆಲಸದಲ್ಲಿ ಸಂಘದವರನ್ನು ಜತೆಗೂಡಿಸಿಕೊಳ್ಳಲು ಅವರು ಸುತರಾಂ ಸಿದ್ಧರಿರಲಿಲ್ಲ. ಆದರೆ ದಿವಂಗತ ಹನುಮಾನಪ್ರಸಾದಜಿ ಪೋದ್ದಾರ ಅವರ ಆಗ್ರಹಕ್ಕೆ ಕಟ್ಟುಬಿದ್ದು ಒಂದು ಜಿಲ್ಲೆಯ ಹೊಣೆಯನ್ನು ಅವರು ಸಂಘದವರಿಗೆ ಒಪ್ಪಿಸಿದರು. ಒಮ್ಮೆ ಬೇರೆ ಬೇರೆ ಜಿಲ್ಲೆಗಳಲ್ಲಾದ ಕೆಲಸದ ತಪಾಸಣೆಯ ಪ್ರಸಂಗ. ಸಂಘದ ಕಾರ್ಯಕರ್ತರನ್ನು ಕರೆಸಿ, ಪರಿಹಾರ ಕಾರ್ಯಕ್ಕಾಗಿ ನೀಡಲಾಗಿದ್ದ ಹಣದ ಲೆಕ್ಕಾಚಾರ ತೋರಿಸುವಂತೆ ಕೇಳಲಾಯಿತು. ಕಾರ್ಯಕರ್ತರು ಹಿಂದಿನ ದಿನದವರೆಗಿನ ಎಲ್ಲ ವಿವರಗಳನ್ನು ಅವರಿಗೆ ಕೂಡಲೇ ತೋರಿಸಿದರು. ಎಲ್ಲವನ್ನು ನೋಡಿದ ಮೇಲೆ ಅವರು ಇನ್ನೂ ಮನದಲ್ಲಿ ಸಂಶಯವಿರಿಸಿಕೊಂಡೇ "ಮಿಕ್ಕಿದೆಲ್ಲವೂ ಸರಿಯಾಗಿಯೇ ಇರುವಂತೆ ಕಾಣುತ್ತದೆ. ಆದರೆ ಒಂದು ಸಂಗತಿ ಇಲ್ಲಿ ಕಾಣುತ್ತಿಲ್ಲವಲ್ಲ" ಎಂದರು. ಕಾರ್ಯಕರ್ತರು ಆಶ್ಚರ್ಯಚಕಿತರಾಗಿ "ಏನದು?" ಎಂದು ಅವರನ್ನು ಪ್ರಶ್ನಿಸಿದರು. ಜಯಪ್ರಕಾಶಜಿ "ನಿಮ್ಮ ಖರ್ಚಿಗಾಗಿ ಬಳಸಲಾದ ಹಣದ ಉಲ್ಲೇಖವೇ ಎಲ್ಲೂ ಇಲ್ಲವಲ್ಲ" ಎಂದರು. ಕಾರ್ಯಕರ್ತರು ನಗುತ್ತ "ಸಂಘದಲ್ಲಿ ನಾವು ಕಲಿತಿರುವುದೇ ಅದು - 'ಮನೆಯಲ್ಲಿ ಉಂಡು, ದೇಶದ ಕೆಲಸ ಮಾಡು' ಎಂಬುದು. ಸಮಾಜಕ್ಕಾಗಿ ಮಾಡಲಾದ ಕೆಲಸ ಯಾವುದೇ ಇರಲಿ, ಅದಕ್ಕೆ ಬೆಲೆ ಕಟ್ಟುವ ವಿಚಾರ ನಮ್ಮ ಕನಸಿನಲ್ಲೂ ಸುಳಿಯುವುದಿಲ್ಲ. ನಮ್ಮ ನಮ್ಮ ಊರುಗಳಿಂದ ಇಲ್ಲಿಗೆ ಬಂದುಹೋಗುವ ಬಸ್ ವೆಚ್ಚ ಸಹ ನಾವು ಸ್ವಂತ ಜೇಬಿನಿಂದಲೇ ಮಾಡಿದ್ದೇವೆ. ಪೀಡಿತರಿಗಾಗಿ ಕೊಡಲಾದ ಹಣದಲ್ಲಿ ಒಂದು ಚಿಕ್ಕಾಸನ್ನು ಸಹ ಸ್ವಂತಕ್ಕಾಗಿ ಬಳಸುವುದನ್ನು ನಾವು ಪಾಪವಾಗಿ ತಿಳಿಯುತ್ತೇವೆ" ಎಂದರು. ಇದನ್ನು ಕೇಳಿ ಬಾಬೂ ಜಯಪ್ರಕಾಶಜಿ ಅವರ ಆಶ್ಚರ್ಯಕ್ಕೆ ಪಾರವೇ ಇಲ್ಲದಂತಾಯಿತು. ಈ ಪ್ರಸಂಗ ಅವರಿಗೆ ಸಂಘದ ನೈಜ ದರ್ಶನ ಮಾಡಿಸಿದ ಮೊದಲ ಸಂದರ್ಭವಾಯಿತು. ಅಲ್ಲಿನವರೆಗೆ ತನ್ನ ಮನದಲ್ಲಿ ಮನೆಮಾಡಿದ್ದ ಪೂರ್ವಾಗ್ರಹ ಕಲ್ಪನೆಗಳೆಲ್ಲದರ ಮರುವಿಚಾರ ಮಾಡಲು ಅವರು ತೊಡಗಿದರು.

ಸ್ವಯಂಸೇವಕರು ನಡೆಸುವ ಸೇವಾ ಕಾರ್ಯಗಳಲ್ಲಿ ಇನ್ನೂ ಕೆಲವು ವಿಶೇಷತೆಗಳಿವೆ. ಅವರ ದೃಷ್ಟಿಯಲ್ಲಿ ಸೇವೆ ಕೇವಲ ಉಪಕಾರದ ರೀತಿಯಲ್ಲಿ ಅಲ್ಲ. ಸೇವೆಯ ಮೂಲಕ ಅದನ್ನು ಪಡೆಯುವವರಲ್ಲಿ ಸ್ವಾವಲಂಬನೆಯ ಭಾವನೆಯೂ ಬೆಳೆಯಬೇಕು. ಸ್ವಂತ ಪ್ರಯತ್ನದಿಂದ ತಮ್ಮ ಜೀವನವನ್ನು ಸುಧಾರಿಸಲು ಅವರು ಸಾಮರ್ಥ್ಯಗಳಿಸಬೇಕು. ಕುಡಿತ, ಜೂಜು, ತಮ್ಮ ತಮ್ಮೊಳಗೆ ಜಗಳ ಇತ್ಯಾದಿಗಳಿರುವಲ್ಲಿ ಅವುಗಳಿಂದ ಅವರು ಬಿಡುಗಡೆಯಾಗಬೇಕು. ತಾವು ಹಿಂದುಗಳು ಎಂಬ ಸ್ವಾಭಿಮಾನ ಅವರಲ್ಲಿ ಎಚ್ಚರಗೊಳ್ಳಬೇಕು. ತಮ್ಮದಾಗಿರುವ ಮಂದಿರ, ಗೋವು, ಸ್ತ್ರೀ ಇವರನ್ನೆಲ್ಲ ಪವಿತ್ರವಾಗಿ ತಿಳಿದು ಅವುಗಳ ರಕ್ಷಣೆಗಾಗಿ ಅವರು ಮುಂದಾಗಬೇಕು. ಮಿಕ್ಕ ಹಿಂದುಗಳ ಜತೆ ಸಮಾನತೆಯಿಂದ ಅವರು ವ್ಯವಹರಿಸಬೇಕು. ಇಂತಹ ಹಲವು ವಿಧ ಉತ್ತಮ ಬದಲಾವಣೆಗಳು ಅಲ್ಲಿ ಬರುವಂತಾಗಬೇಕು. ಇವೇ ಸೇವಾ ಕಾರ್ಯಕ್ಕಾಗಿ ಮುಂದಾಗುವ ಸಂಘದ ಕಾರ್ಯಕರ್ತರ ಪ್ರಮುಖ ಉದ್ದೇಶವಾಗಿರುತ್ತದೆ. ಸಂಪೂರ್ಣ ದೇಶದಲ್ಲಿ ಇಂತಹ

ಬದಲಾವಣೆ ಒಂದಿಷ್ಟು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಸಾವಿರಾರು ಸೇವಾಬಸ್ತಿಗಳಲ್ಲಿ ಈಗ ಕಾಣಸುತ್ತಿದೆ.

## ಸೇವಾ ಕಾರ್ಯಗಳಿಂದಾಗಿ ಸಮಾಜದಲ್ಲಿ ಉತ್ತಮ ಬದಲಾವಣೆ

ಎಂದರೆ, ನಮ್ಮ ಹಿಂದು ಸಮಾಜವನ್ನು ಒಳಗಿನಿಂದ ದುರ್ಬಲಗೊಳಿಸುವಂತಹ ಸಮಾಜಘಾತುಕ ರೂಢಿಗಳನ್ನು ಮತ್ತು ನಂಬಿಕೆಗಳನ್ನು ದೂರಗೊಳಿಸುವುದು ಈ ಸೇವಾಕಾರ್ಯಗಳ ಪ್ರಮುಖವಾದ ಉದ್ದೇಶವಾಗಿದೆ. ಉದಾಹರಣೆಗೆ ಅಸ್ಪೃಶ್ಯತೆ, ಜಾತಿ ಭೇದ, ಮೇಲುಕೀಳು, ಶ್ರೀಮಂತ-ಬಡವ ಇವೆಲ್ಲವನ್ನು ನಿವಾರಿಸಲು ಅನೇಕ ವಿಧದ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಉತ್ತರಭಾರತದಲ್ಲಿ ದುರ್ಗಾಷ್ಟಮಿಯಂದು ಕನ್ಯಾಪೂಜನ ನಡೆಸುತ್ತಾರೆ. ಅಂದು ಸಾವಿರಾರು ಸ್ವಯಂಸೇವಕರ ಮನೆಗಳಿಗೆ ಸೇವಾ ಬಸ್ತಿಗಳಿಂದ ಸಣ್ಣ ಸಣ್ಣ ಹೆಣ್ಣುಮಕ್ಕಳನ್ನು ಆಮಂತ್ರಿಸಲಾಗುತ್ತದೆ. ಅಲ್ಲಿ ವಿಧಿವತ್ತಾಗಿ ಅವರ ಪೂಜೆಯಾಗುತ್ತದೆ. ಸಂಪೂರ್ಣ ಕುಟುಂಬದ ಹಬ್ಬವಾಗಿ ಅದು ಆಚರಿಸಲ್ಪಟ್ಟು ಆ ಬಸ್ತಿಗಳಲ್ಲಿ ಪರಸ್ಪರ ಸಮತೆ, ಮಮತೆಗಳ ವಾತಾವರಣ ಸೃಷ್ಟಿಯಾಗುತ್ತದೆ. ಇದಲ್ಲದೆ ದೇಶಾದ್ಯಂತ ಸಾವಿರಾರು ಸ್ವಯಂಸೇವಕರ ಪರಿವಾರದಲ್ಲಿನ ಪುರುಷರು, ತಾಯಂದಿರು, ಸೋದರಿಯರು ಸೇವಾಬಸ್ತಿಗಳಲ್ಲಿನ ಗುಡಿಸಲುಗಳಿಗೆ ಹೋಗುತ್ತಾರೆ, ಅಲ್ಲಿರುವವರ ಜತೆ ಕೂತು ತಿನ್ನುತ್ತಾರೆ, ಕುಡಿಯುತ್ತಾರೆ, ತಮ್ಮ ಮನೆಗಳಿಗೂ ಅದೇ ರೀತಿ ಅಲ್ಲಿರುವವರನ್ನು ಆಹ್ವಾನಿಸಿ ಅವರ ಆತಿಥ್ಯ ಮಾಡುತ್ತಾರೆ.

ರಾಷ್ಟ್ರದ ಪುನರ್ನಿರ್ಮಾಣದಲ್ಲಿ ಒಂದು ಅತ್ಯಂತ ಮಹತ್ವದ ಸಂಗತಿ ಎಂದರೆ ಗ್ರಾಮ ವಿಕಾಸದ್ದು. ಭಾರತವು ಸ್ವತಂತ್ರವಾದ ನಂತರ ದೇಶದ ಗ್ರಾಮೀಣ ಜೀವನವು ಸುಧಾರಿಸುವ ಬದಲಾಗಿ, ದಿನಗಳೆದಂತೆ ಕೆಡುತ್ತಿರುವುದು ನಮಗೆಲ್ಲ ತಿಳಿದೇ ಇದೆ. ಇದಕ್ಕೆ ಪ್ರಮುಖ ಕಾರಣವೆಂದರೆ, ಮಹಾತ್ಮಾ ಗಾಂಧೀಜಿಯವರು ದೇಶದ ಮುಂದಿರಿಸಿದ ಗ್ರಾಮಾಧಾರಿತ ಆರ್ಥಿಕ ವಿಕಾಸದ ವಿಚಾರವನ್ನು ಸಮಾಜವು ಪೂರಾ ಅಲಕ್ಷಿಸಿದ್ದು. ಈ ಸ್ಥಿತಿಯಲ್ಲಿ, ತಮ್ಮ ಕೈಲಾದಷ್ಟು ಬದಲಾವಣೆ ತರುವ ಸಲುವಾಗಿ ಸ್ವಯಂಸೇವಕರು ಕೆಲವು ಗ್ರಾಮಗಳ ಸಮಗ್ರ ವಿಕಾಸಕ್ಕಾಗಿ ಪ್ರಯತ್ನ ಆರಂಭಿಸಿದ್ದಾರೆ. ಅಣ್ಣಾ ಹಜಾರೆಯವರು ತನ್ನ ಅತ್ಯಂತ ಹಿಂದುಳಿದ ಗ್ರಾಮ ರಾಳೆಗಣಸಿಂದಿಯನ್ನು 10-15 ವರ್ಷಗಳೊಳಗೆ ರಾಮರಾಜ್ಯದಂತೆ ಮಾಡಿರುವುದನ್ನು, ಸ್ವಯಂಸೇವಕರು ತಮ್ಮ ಮುಂದೆ ಒಂದು ಸುಂದರ ಮಾದರಿಯಾಗಿ ಇರಿಸಿಕೊಂಡಿದ್ದಾರೆ. ಮಧ್ಯಪ್ರದೇಶದ ಒಂದು ಗ್ರಾಮ-ಮೋಹದ್ ಅನ್ನು ಅಲ್ಲಿನ ಸಂಘದ ಕಾರ್ಯಕರ್ತರು ಅದೇ ರೀತಿ ಒಂದು ಉತ್ತಮ ಸಮೃದ್ಧ ಗ್ರಾಮವಾಗಿ ಮಾಡಿದ್ದಾರೆ. ಕೃಷಿಯಲ್ಲಿ ಸುಧಾರಣೆ, ಗೋಬರ ಅನಿಲ ಮತ್ತು ಜೈವಿಕ ಗೊಬ್ಬರದ ವ್ಯಾಪಕವಾದ ಉತ್ಪಾದನೆ, ನೂರಾರು ಗ್ರಾಮ ಬಂಧುಗಳಿಗೆ ಒಂದಿಷ್ಟು ಸಂಸ್ಕೃತದಲ್ಲಿ ಮಾತುಕತೆ ಅಭ್ಯಾಸ, ಮನೆಗಳಲ್ಲಿ, ರಸ್ತೆಗಳಲ್ಲಿ ಶುಚಿತೆ, ಜಾತಿಭೇದದ ಸುಮಾರಾಗಿ ನಿರ್ಮೂಲನ, ದುಶ್ಚಟಗಳಿಂದ ಮುಕ್ತಿ ಇತ್ಯಾದಿ ಸುಂದರ ಬದಲಾವಣೆಗಳು ಕಳೆದ 10-12 ವರ್ಷಗಳಲ್ಲಿ ಅಲ್ಲಿ ಸಂಭವಿಸಿವೆ. ಕರ್ನಾಟಕದ ಮಂಗಳೂರು ಜಿಲ್ಲೆಯ ಮೂವತ್ತಮೂರು ಗ್ರಾಮಗಳಲ್ಲಿನ ಜನರು ತಮ್ಮ ಹಳ್ಳಿಗಳನ್ನು ಹಸಿವು, ರೋಗ ಮತ್ತು ಅನಕ್ಷರತೆಗಳಿಂದ ಸಂಪೂರ್ಣವಾಗಿ ಬಿಡುಗಡೆಗೊಳಿಸುವ ದಿಕ್ಕಿನಲ್ಲಿ ಮುಂದುವರಿದಿದ್ದಾರೆ. ಇದಲ್ಲದೆ ಗ್ರಾಮವಿಕಾಸದ ರೀತಿಯಲ್ಲೆ ನಗರಪ್ರದೇಶಗಳ ಸೇವಾಬಸ್ತಿಗಳಲ್ಲೂ ಸಮಗ್ರ ವಿಕಾಸದ ಯೋಜನೆಗಳಾಗಿವೆ.

## ಹಿಂದು ಏಕತೆಯ ಹೊಸ ಮಂತ್ರ

ಹಿಂದುಗಳೆಲ್ಲರಲ್ಲಿ ಪರಸ್ಪರ ಸಮಾನತೆ ಹಾಗೂ ಸೋದರತೆಯ ಭಾವನೆ ಬೆಳೆಯಬೇಕೆಂಬ ಸಲುವಾಗಿ ಸಾಧುಸಂತರ ಪಾತ್ರವೂ ಹೆಚ್ಚೆಚ್ಚು ಪ್ರಭಾವಿಯಾಗುತ್ತಿದೆ. ಪೂಜ್ಯರಾದ

ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ವೈದಿಕ ಆಚಾರ್ಯರನ್ನು ಮೊದಲ್ಗೊಂಡು ಹಿಂದು ಸಮಾಜದ ಜೈನ, ಸಿಖ್ಖ, ವೈಷ್ಣವ, ಶೈವ ಇತ್ಯಾದಿ ಎಲ್ಲ ವಿಧದ ಪಂಥ ಸಂಪ್ರದಾಯಗಳ ಪ್ರಮುಖ ಮಠಾಧೀಶರು ಮತ್ತು ಧರ್ಮಾಚಾರ್ಯರು, ಕುಂಭ ಮೇಳದ ಪ್ರಸಂಗದಲ್ಲಿ ಪ್ರಯಾಗದಲ್ಲಿ ನಡೆದ ವಿಶ್ವಹಿಂದು ಪರಿಷತ್ತಿನ ವಿಶ್ವಸಮ್ಮೇಳನದಲ್ಲಿ ಒಂದುಗೂಡಿ ಬಂದಿದ್ದರು. ಎಲ್ಲ ಹಿಂದುಗಳಿಗೆ 'ಹಿಂದವಃ ಸೋದರಾಃ ಸರ್ವೇ' - ಎಲ್ಲ ಹಿಂದುಗಳು ಒಬ್ಬಳೇ ತಾಯಿಯ ಗರ್ಭದಲ್ಲಿ ಜನಿಸಿದ ಸೋದರ ಸೋದರಿಯರು ಎಂಬ ಸಮಾನತೆಯ ಒಂದು ಅಭಿನವ ಮಂತ್ರವನ್ನು ಅಲ್ಲಿ ಅವರು ಉಪದೇಶಿಸಿದ್ದಾರೆ.

ಸಾಮಾಜಿಕ ಸಮರಸತೆಯ ಈ ಮಹಾ ಮಂತ್ರವನ್ನು ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ವ್ಯವಹಾರಕ್ಕಿಳಿಸಬೇಕೆಂಬುದು ನಮ್ಮ ಮನದ ಬಯಕೆಯಾಗಿದೆ. ಸಂಘವು ಆರಂಭದಿಂದಲೂ ಎಲ್ಲ ಮಂದಿರಗಳಲ್ಲಿ ಎಲ್ಲ ಹಿಂದುಗಳಿಗೂ ಪ್ರವೇಶ ಸಿಗಬೇಕು ಎಂಬುದರ ಪರವಾಗಿತ್ತು. ಆದರೆ ಸಂಘದ ಈ ದೃಷ್ಟಿಕೋನ ಅಷ್ಟಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ನಮ್ಮ ಪವಿತ್ರ ವೇದಗಳು, ಉಪನಿಷತ್ತುಗಳು, ಯೋಗಶಾಸ್ತ್ರ ಇತ್ಯಾದಿ ಎಲ್ಲವೂ ಸಂಪೂರ್ಣ ಸಮಾಜದ ವಾರಸಿಕೆಯಾಗಿದೆ. ಇಂತಹ ಸ್ಪಷ್ಟ ದೃಷ್ಟಿಕೋನದಿಂದಾಗಿ ಸ್ವಯಂಸೇವಕರು ಕೇರಳ, ತಮಿಳುನಾಡಿನಂತಹ ಪ್ರಾಂತಗಳಲ್ಲಿ ಅಬ್ರಾಹ್ಮಣ ಬಂಧುಗಳಿಗೂ ವೈದಿಕ ಪೂಜಾಪಾಠ ವಿಧಿಗಳಲ್ಲಿ ಪ್ರಶಿಕ್ಷಣ ನೀಡಿದರು. ಅಭಿಮಾನದ ಸಂಗತಿ ಎಂದರೆ ಅವರಲ್ಲನೇಕ ಬಂಧುಗಳು ಹಲವಾರು ಮಂದಿರಗಳಲ್ಲಿ ಪೂಜಾರಿಗಳೂ ಆದರು. ಇದೇ ದಿಕ್ಕಿನಲ್ಲಿ ಇನ್ನೊಂದು ಉಜ್ವಲವಾದ ಉದಾಹರಣೆ ಎಂದರೆ ಅಯೋಧ್ಯೆಯಲ್ಲಿ ಶ್ರೀರಾಮ ಮಂದಿರಕ್ಕೆ ಓರ್ವ ಹರಿಜನ ಬಂಧು ಶ್ರೀ ರಾಮೇಶ್ವರಜಿ ಚೌಪಾಲ ಅವರಿಂದ ಶಿಲಾನ್ಯಾಸ ಆದುದು. ಎಂದರೆ, ಸಂಘದ ಕಲ್ಪನೆಯಂತೆ ಸಾಮಾಜಿಕ ಸಮರಸತೆ ಎಂಬುದು ಕೇವಲ ಆರ್ಥಿಕ, ರಾಜಕೀಯ, ಆಡಳಿತಾತ್ಮಕ, ಶೈಕ್ಷಣಿಕ ಕ್ಷೇತ್ರಗಳಿಗೆ ಮಾತ್ರ ಸೀಮಿತವಾದುದಲ್ಲ, ಬದಲಾಗಿ ಹಿಂದು ಜೀವನದ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿರುವಂತಹದು.

ಯೋಗ ಶಿಕ್ಷಣವು ವಿಶ್ವಕ್ಕೆ ಭಾರತದ್ದೇ ಕೊಡುಗೆ. ಅದನ್ನು ಸಂಪೂರ್ಣ ಭಾರತದಲ್ಲಿ ಜನಪ್ರಿಯಗೊಳಿಸುವ ಸಲುವಾಗಿ ಶಾಖೆಗಳಲ್ಲಿ ಮತ್ತು ಇತರ ಕಡೆಗಳಲ್ಲೂ ಯೋಗ ಪ್ರಶಿಕ್ಷಣ ಕೇಂದ್ರಗಳನ್ನು ಆರಂಭಿಸಲಾಗಿದೆ. ಇವುಗಳಲ್ಲಿ ಸಂಘ ಮತ್ತು ರಾಷ್ಟ್ರ ಸೇವಿಕಾ ಸಮಿತಿಯ ಸಾವಿರಾರು ಯುವಕ ಯುವತಿಯರು ಯೋಗಶಿಕ್ಷಣವನ್ನು ನೀಡುತ್ತಿದ್ದಾರೆ. ದೇವವಾಣಿ ಸಂಸ್ಕೃತವನ್ನು ಇಂಗ್ಲೀಷರು ಮೃತಭಾಷೆ ಎಂದು ಕರೆದಿದ್ದರು. ಅವರು ಹೇಳಿದುದನ್ನು ನಮ್ಮವರೇ ಆದ ಭ್ರಮಿಷ್ಠ ಶಿಕ್ಷಿತ ಬಂಧುಗಳು ಹೌದೌದು ಎನ್ನುತ್ತ ಒಪ್ಪಿಕೊಂಡಿದ್ದರು. ಆದರೆ ಸಂಘದಿಂದ ಪ್ರವಹಿತವಾದ ನವಜಾಗರಣದ ಅಲೆ ಅಲ್ಲಿಯೂ ಹೊಸ ತರಂಗವನ್ನೆಬ್ಬಿಸಿದೆ. ಸಾವಿರಾರು ಸಂಭಾಷಣಾ ಶಿಬಿರಗಳ ಮೂಲಕ 'ಸಂಸ್ಕೃತ ಭಾರತಿ'ಯು ಕೇವಲ ಹತ್ತು ದಿನಗಳಲ್ಲಿ ಸಾಮಾನ್ಯ ವ್ಯಾವಹಾರಿಕ ಜೀವನದಲ್ಲಿ ಸಂಸ್ಕೃತದಲ್ಲಿ ಮಾತನಾಡುವುದು ಸಾಧ್ಯ ಎಂದು ಪ್ರತ್ಯಕ್ಷ ಸಿದ್ಧಪಡಿಸಿದೆ. ಮತ್ತು ಇದನ್ನು ವಿಶೇಷವಾಗಿ ಸೇವಾಬಸ್ತಿಗಳಲ್ಲಿ ನಡೆಸಲಾಗುತ್ತಿರುವುದರಿಂದ ಅಲ್ಲಿನವರಲ್ಲಿ ಸಾಂಸ್ಕೃತಿಕ ಆತ್ಮಗೌರವ ಎಚ್ಚರಗೊಂಡಿದೆ. ದೇವವಾಣಿಯು ಈಗಿನ ಲೋಕವಾಣಿಯೂ ಆಗುತ್ತಿದೆ. ಈಗಂತೂ ಸಂಸ್ಕೃತ ಸಂಭಾಷಣ ಶಿಬಿರಗಳು ಲಂಡನ್, ವಾಶಿಂಗ್‌ಟನ್‌ವರೆಗೂ ತಲುಪಿವೆ.

## ಮರಳಿ ಮನೆಗೆ ಬರಲು ಕರೆ

ಭಾರತದ ಶ್ರೇಷ್ಠ ಧರ್ಮಾಚಾರ್ಯರು ಹಿಂದು ಧರ್ಮ ಮತ್ತು ಹಿಂದು ಸಮಾಜದ ರಕ್ಷಣೆಗಾಗಿ ಇನ್ನೊಂದು ಅತ್ಯಂತ ಮಹತ್ವದ ಮಾರ್ಗದರ್ಶನ ನೀಡಿದ್ದಾರೆ. ಕಳೆದ ಸಾವಿರ

ವರ್ಷಗಳಲ್ಲಿ, ಭಾರತದ ಮೇಲೆ ಇಸ್ಲಾಮೀ ಆಕ್ರಮಕರು ದಂಡೆತ್ತಿ ಬರಲು ಆರಂಭವಾದಾಗಿನಿಂದ, ಇಲ್ಲಿ ಸತತವಾಗಿ ಹಿಂದು ಮಠ ಮಂದಿರಗಳ ವಿಧ್ವಂಸ, ಹಿಂದು ಸ್ತ್ರೀಯರ ಅಪಹರಣ, ಹಿಂದು ಧರ್ಮೋಪದೇಶಕರನ್ನು ಹುಡುಕಿ-ಹುಡುಕಿ ಕೊಲ್ಲುವುದು ಮತ್ತು ಬೃಹತ್ ಪ್ರಮಾಣದಲ್ಲಿ ಹಿಂದುಗಳನ್ನು ಮುಸಲ್ಮಾನರನ್ನಾಗಿ ಮಾಡುವುದು ಆರಂಭವಾಯಿತು. ಈ ರೀತಿ ಕತ್ತರಿಯ ಎರಡು ಅಲಗುಗಳ ನಡುವೆ ಹಿಂದು ಸಮಾಜವು ಸಿಕ್ಕಿಕೊಂಡಿತು. ಪರಿಣಾಮವಾಗಿ ಹಿಂದುಗಳ ಸಂಖ್ಯೆಯೂ ಇಳಿಮುಖವಾಯಿತು. ಮತಾಂತರಗೊಂಡು ಮುಸಲ್ಮಾನರಾದವರೆಲ್ಲ ಹೊರಗಿಂದ ಬಂದ ಆಕ್ರಮಣಕಾರಿಗಳ ವ್ಯೂಹದಲ್ಲಿ ಸೇರಿಕೊಂಡು, ನಿನ್ನೆ ಮೊನ್ನೆವರೆಗೆ ತಮ್ಮ ಸೋದರ ಸೋದರಿಯರಾಗಿದ್ದ ಹಿಂದುಗಳ ಮೇಲೆ ಆಕ್ರಮಣವೆಸಗಲಾರಂಭಿಸಿದರು. ಇಂಗ್ಲಿಷರು ಮತ್ತು ಪೋರ್ತುಗೀಸ್ ಆಕ್ರಮಕರ ಜತೆ ಅವರ ಮತಪ್ರಚಾರಕರೂ ಬಂದರು. ಅವರೂ ಸಹ ಮುಸಲ್ಮಾನರ ರೀತಿಯಲ್ಲೇ ಹಿಂದು ವಿರೋಧಿ ಕೃತ್ಯಗಳಲ್ಲಿ ತೊಡಗಿದರು. ಈ ರೀತಿ ಎಲ್ಲೆಲ್ಲಿ ಮುಸಲ್ಮಾನರ ರಾಜಕೀಯ ವರ್ಚಸ್ಸು ಬೆಳೆಯಿತೋ, ಅಲ್ಲಲ್ಲಿ ಅವರ ಮತಾನುಯಾಯಿಗಳ ಸಂಖ್ಯೆಯೂ ಬೆಳೆಯುತ್ತಲೇ ಹೋಯಿತು.

ಇದರ ಭಯಾನಕ ದುಷ್ಪರಿಣಾಮಗಳೇನೇನು ಆದವು ಎಂಬುದು ನಿಮಗೆಲ್ಲ ಚೆನ್ನಾಗಿ ತಿಳಿದೇ ಇದೆ. ಗಾಂಧಾರಿಯ ನಾಡು ಗಾಂಧಾರವು ಅಫಘಾನಿಸ್ತಾನವಾಯಿತು. ಸಿಂಧ, ಪಶ್ಚಿಮ ಪಂಜಾಬ, ಬಲೂಚಿಸ್ತಾನ, ಸರಹದ್ದು ಪ್ರಾಂತ ಇವೆಲ್ಲವೂ ಭಾರತದಿಂದ ಕತ್ತರಿಸಲ್ಪಟ್ಟು ಪಶ್ಚಿಮ ಪಾಕಿಸ್ತಾನ ಎಂದರೆ ಇಸ್ಲಾಮೀಸ್ತಾನವಾದವು. ಬಂಗಾಲದ ಪೂರ್ವಭಾಗವೂ ಇದೇರೀತಿ ಪೂರ್ವಪಾಕಿಸ್ತಾನವಾಗಿ, ಈಗ ಬಾಂಗ್ಲಾದೇಶವೆನಿಸಿಕೊಂಡಿದೆ. ಎಂದರೆ ನಮ್ಮ ದೇಶ, ನಮ್ಮ ರಾಷ್ಟ್ರವು ತುಂಡು ತುಂಡಾಯಿತು. ಇತ್ತ ನಮ್ಮ ದೇಶದ ಈಶಾನ್ಯ ಪ್ರದೇಶಗಳಲ್ಲಿ ಕ್ರೈಸ್ತ ಪಾದರಿಗಳಿಂದ ಇದೇ ವಿಧದ ಕೆಲಸ ನಡೆಯುತ್ತಿದೆ. ಅಲ್ಲೂ ಭಾರತವನ್ನು ಕತ್ತರಿಸಿ ಕ್ರೈಸ್ತಸ್ತಾನ ರಚಿಸುವ ಸಲುವಾಗಿ ಅಲ್ಲಿನ ಸಣ್ಣಸಣ್ಣ ರಾಜ್ಯಗಳಲ್ಲಿ ಸಶಸ್ತ್ರ ಉಗ್ರ ಆಂದೋಲನಗಳು ನಡೆಯುತ್ತಿವೆ.

ಇದಕ್ಕೆಲ್ಲ ಅಂತಿಮವಾಗಿ ಹೊಣೆಗಾರರು ಯಾರು? ನಾವೇ, ಹಿಂದುಗಳೇ. ನಮ್ಮ ಧರ್ಮಕ್ಕೆ ನಷ್ಟವಾಗುತ್ತಲೇ ಇದ್ದಾಗ, ನಮ್ಮದೇ ಸಮಾಜದಿಂದ ಕತ್ತರಿಸಲ್ಪಟ್ಟ ಭಾಗ ಶತ್ರು ಪಕ್ಷದಲ್ಲಿ ಸೇರುತ್ತಿದ್ದಾಗ ನಾವು ಕಣ್ಮುಚ್ಚಿ ಕುಳಿತಿದ್ದೆವು. ಈ ರೀತಿ ಹಿಂದುಗಳ ಇಸ್ಲಾಮೀಕರಣ ಮತ್ತು ಕ್ರಿಸ್ತೀಕರಣ ಒಮ್ಮುಖದ ದಾರಿಯಾಗಿ ನಡೆಯುತ್ತಲೇ ಹೋಯಿತು, ಈಗಲೂ ನಡೆಯುತ್ತಲೇ ಇದೆ. ಇದರ ಹಿಂದಿರುವ ಮಾನಸಿಕತೆ ಏನು? ಒಮ್ಮೆ ವ್ಯಕ್ತಿಯೊಬ್ಬ ಹಿಂದು ಧರ್ಮ ಬಿಟ್ಟು ಹೋದನೆಂದರೆ, ಆತ ಸದಾಕಾಲಕ್ಕೂ ಭ್ರಷ್ಟ, ಪತಿತನಾದಂತೆಯೇ. ಆತನನ್ನು ಮರಳಿ ಹಿಂದುಧರ್ಮದಲ್ಲಿ ತರಲು ಸಾಧ್ಯವಿಲ್ಲ. ಆತನನ್ನು ಪುನಃ ಒಳಗೆ ಸೇರಿಸುವುದು ಧರ್ಮವಿರೋಧಿ ಕೃತ್ಯವಾಗುವುದು. ಇಂತಹ ಮಾನಸಿಕತೆಯ ಪರಿಣಾಮವಾಗಿ, ತನ್ನ ಮೂಲ ಹಿಂದು ಧರ್ಮದ ಒಳಗೆ ಮರಳಿ ಬರಲು ಬಯಸುತ್ತಿದ್ದವರಿಗೆ ಸಹ ನಾವು ಪ್ರವೇಶ ನಿರಾಕರಿಸಿದೆವು.

ಆದರೆ ದೇವಲ ಋಷಿಯಿಂದ ಆರಂಭಿಸಿ, ಚೈತನ್ಯ ಮಹಾಪ್ರಭುವಿನ ಹಲವಾರು ಶಿಷ್ಯಂದಿರ ವರೆಗೆ ಮತ್ತು ರಾಜಸ್ಥಾನದ ಅನೇಕ ರಾಜರು ಸಹ ಮತಾಂತರಿತ ಹಿಂದುಗಳನ್ನು ಪುನಃ ಹಿಂದುಗಳಾಗಿ ಮಾಡಲು ಪ್ರಯತ್ನಿಸಿದ್ದಾರೆ. ಕಳೆದ ನೂರಿನ್ನೂರು ವರ್ಷಗಳಲ್ಲಿ ಆರ್ಯಸಮಾಜ, ಮಸೂರಾಶ್ರಮ ಮತ್ತು ಸಾವರಕರರ ಮುಂದಾಳುತನದಲ್ಲಿ ಹಿಂದು ಮಹಾಸಭಾ ಮೊದಲಾದ ಸಂಸ್ಥೆಗಳು ಸಹ ಈ ನಿಟ್ಟಿನಲ್ಲಿ ಪ್ರಯತ್ನ ನಡೆಸಿವೆ. ಈ ಕಾರ್ಯಕ್ಕಾಗಿಯೇ ಸ್ವಾಮಿ ಶ್ರದ್ಧಾನಂದರಂತಹ ಆರ್ಯ ಸಮಾಜದ ಅಖಿಲ ಭಾರತೀಯ ಸ್ತರದ ನಾಯಕರು ತಮ್ಮ ಆತ್ಮಾಹುತಿ

ನೀಡಿದ್ದಾರೆ. ಸ್ವಾಮಿ ವಿವೇಕಾನಂದರು ಸಹ "ನೆನಪಿರಲಿ, ಹಿಂದುಧರ್ಮ ಬಿಟ್ಟು ಹೋಗುವ ಒಬ್ಬೊಬ್ಬ ವ್ಯಕ್ತಿಯಿಂದಲೂ ಹಿಂದು ಸಮಾಜದಲ್ಲಿ ಒಂದು ಸಂಖ್ಯೆ ಕಡಿಮೆಯಾಗುವುದಷ್ಟೇ ಅಲ್ಲ, ಶತ್ರುಗಳ ಸಂಖ್ಯೆ ಒಂದು ಹೆಚ್ಚಾಗುವುದು" ಎಂದು ಎಚ್ಚರಿಕೆಯ ಗಂಟೆ ಬಾರಿಸಿದ್ದರು. ಈಗ ಕ್ರಮೇಣ ಹಿಂದು ಸಮಾಜದಲ್ಲಿ ಈ ಘೋರ ಅಪಾಯದ ಬಗ್ಗೆ ಜಾಗೃತಿ ಉಂಟಾಗುತ್ತಿದೆ. ಈ ವಿಷಯದಲ್ಲಿ ಹಿರಿಯ ಸಾಧು ಸಂತ ಧರ್ಮಾಚಾರ್ಯರೂ ಮುಂದೆ ಬಂದು ಹಿಂದು ಸಮಾಜದ ಆತ್ಮರಕ್ಷಣೆಗಾಗಿ 'ನ ಹಿಂದುಃ ಪತಿತೋ ಭವೇತ್' ಎಂಬ ಮಹಾಮಂತ್ರವೊಂದನ್ನು ನೀಡಿದ್ದಾರೆ. ಎಂದರೆ 'ಯಾವನೇ ಹಿಂದು ಎಂದೂ ಪತಿತ, ಭ್ರಷ್ಟನಾಗಲಾರ' ಎಂದು ಭರವಸೆ ಹೇಳಿದ್ದಾರೆ. ಅದರರ್ಥ, ಯಾವನೇ ಹಿಂದುವು ಮುಸಲ್ಮಾನ ಅಥವಾ ಕ್ರೈಸ್ತನಾದ ಮಾತ್ರಕ್ಕೆ ಆತ ಸದಾಕಾಲಕ್ಕೂ ಭ್ರಷ್ಟನಾಗಲಾರ. ಆತನನ್ನು ಅಗತ್ಯವಾಗಿ ಹಿಂದುಧರ್ಮದೊಳಗೆ ವಾಪಸ್ ಸೇರಿಸಿಕೊಳ್ಳಬೇಕು. ಹಿಂದುಗಳಲ್ಲಾದ ಇಂತಹ ಆತ್ಮಜಾಗೃತಿಯಿಂದಾಗಿ ಈಗೀಗ ನಿಧಾನವಾಗಿ ಹಿಂದುಧರ್ಮವನ್ನು ಬಿಟ್ಟು ಹೋಗಿರುವ ಬಂಧುಭಗಿನಿಯರು ಪುನಃ ತಮ್ಮ ಮೂಲ ಧರ್ಮ, ಪರಂಪರೆಯೊಳಗೆ ಬರಲಾರಂಭಿಸಿದ್ದಾರೆ. ಹಿಂದುಗಳೀಗ ಇದನ್ನು ಆ ಜನರ "ಮನೆಗೆ ಮರಳುವಿಕೆ" ಎಂಬಂತೆ ನೋಡುತ್ತಾರೆ.

ಇಷ್ಟೊಂದು ವಿಧದ ಹಾಗೂ ಇಷ್ಟೊಂದು ಸಾವಿರಾರು ಸ್ಥಾನಗಳಲ್ಲಿ ನಡೆಯುವಂತಹ ಇವೆಲ್ಲ ಕೆಲಸಗಳು ಕೇವಲ ಸಂಘದ ಹೆಸರಲ್ಲೆ ನಡೆಯುತ್ತವೇನು? ಇಲ್ಲ. ಸಂಘ ಖಂಡಿತವಾಗಿಯೂ ಎಲ್ಲ ಕಡೆ ತನ್ನ ಪ್ರಚಾರವಾಗಲಿ ಎಂದು ಅಪೇಕ್ಷಿಸುವುದಿಲ್ಲ. ಸಂಘದ ಸ್ವಯಂಸೇವಕರು ಆರಂಭಿಸಿರುವಂತಹ ಹಲವಾರು ವಿಧದ - ಸೇವಾಭಾರತಿ, ವನವಾಸಿ ಕಲ್ಯಾಣ ಆಶ್ರಮ, ವಿಶ್ವ ಹಿಂದು ಪರಿಷತ್, ವಿದ್ಯಾ ಭಾರತಿ ಇತ್ಯಾದಿ - ಸೇವಾ ಸಂಘಟನೆಗಳಿವೆ. ಇವುಗಳ ಹೆಸರಲ್ಲೆ ಹೆಚ್ಚಿನ ಸೇವಾಕಾರ್ಯಗಳು ನಡೆಯುತ್ತವೆ. ಇವುಗಳಲ್ಲಿ ಸ್ವಯಂಸೇವಕರಲ್ಲದೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಇತರ ಸ್ತ್ರೀ ಪುರುಷರೂ ಸೇವಾಕಾರ್ಯದಲ್ಲಿ ತೊಡಗಿದ್ದಾರೆ.

## ಸೇವೆ - ಕಾರ್ಯಕರ್ತರ ಆತ್ಮಶುದ್ಧಿಗಾಗಿ

ಕೊನೆಯಲ್ಲಿ ಇನ್ನೊಂದು ಸಂಗತಿಯನ್ನು ನಿಮಗೆ ವಿಶೇಷವಾಗಿ ಹೇಳಬೇಕೆಂದಿದೆ. ಸೇವೆ ಮಾಡುತ್ತ ಸ್ವಯಂಸೇವಕರು ಸಾಮಾಜಿಕ ಬದಲಾವಣೆಯ ಜತೆಯಲ್ಲಿ ಸ್ವತಃ ತಮ್ಮಲ್ಲೂ ಪರಿವರ್ತನೆಯ ಸಂಸ್ಕಾರ ಪಡೆಯುತ್ತಾರೆ. 'ಜನಸೇವೆಯೇ ಜನಾರ್ದನ ಸೇವೆ' ಎಂಬಂತಹ ಭಗವದರ್ಪಣ ಬುದ್ಧಿ ತಮ್ಮಲ್ಲಿ ಜಾಗೃತವಾಗಲಿ ಎಂಬ ಇಚ್ಛೆ ಸದಾ ಅವರಲ್ಲಿರುತ್ತದೆ. ವಿಶೇಷವಾಗಿ ಸೇವಾಬಸ್ತಿಗಳಿಗೆ ಹೋಗುವಾಗ ಅತಿ ದೀರ್ಘಕಾಲ ಸಮಾಜದಿಂದ ಅವರಿಗಾದ ಭೇದಭಾವ, ಅನ್ಯಾಯ, ಅವಮಾನ ಇತ್ಯಾದಿ ಪಾಪಗಳ ಪರಿಮಾರ್ಜನೆಗಾಗಿ ಅವರಿಗೆ ಸೇವೆ ಒಂದು ಮಾಧ್ಯಮ ಅನಿಸುತ್ತದೆ. ಅದು ಆತ್ಮಶುದ್ಧಿಗಾಗಿ ಒಂದು ಆಧ್ಯಾತ್ಮಿಕ ಸಾಧನೆಯಾಗಿದೆ ಎಂದು ತಿಳಿಯಬೇಕಾಗಿ ಸಂಘದ ಶ್ರೀಗುರೂಜಿ ಗೋಲ್ವಲಕರ ಅವರು (ಡಾಕ್ಟರ್ ಹೆಡಗೇವಾರರ ನಂತರ ಸರಸಂಘಚಾಲಕ ಅಥವಾ ಸಂಘದ ಮುಖ್ಯಸ್ಥರಾದವರು) ಕರೆ ನೀಡಿದ್ದರು. ಅವರ ನಂತರ ಸರಸಂಘಚಾಲಕರಾದ ಶ್ರೀ ಬಾಳಾಸಾಹೇಬ ದೇವರಸರಂತೂ "ಅಸ್ಪೃಶ್ಯತೆ ತಪ್ಪಲ್ಲವೆಂದಾದಲ್ಲಿ ಜಗತ್ತಿನಲ್ಲಿ ಇನ್ನಾವುದೂ ತಪ್ಪಾಗಲಾರದು" ಎಂದು ಘೋಷಿಸಿದ್ದರು.

## ಭೀಷಣ ಆಪತ್ತುಗಳುಂಟಾದಾಗ ಸೇವೆ

ಈಗ ಪ್ರಾಕೃತಿಕ ಅಥವಾ ಮನುಷ್ಯ ನಿರ್ಮಿತ ಕಾರಣಗಳಿಂದಾಗುವ ಆಪತ್ತುಗಳಲ್ಲಿ ಸ್ವಯಂಸೇವಕರು ಎಸಗಿದ ಕಾರ್ಯಗಳ ವಿಶೇಷತೆಗಳ ಬಗ್ಗೆ ತಿಳಿಯೋಣ. ಅವಂತೂ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತೇ ಇವೆ. ಅಸ್ಸಾಂ, ಉತ್ತರ ಕಾಶಿ ಮತ್ತು ಮಹಾರಾಷ್ಟ್ರದ

ಲಾತೂರ್ ಜಿಲ್ಲೆಯಲ್ಲಾದ ಭೂಕಂಪವಿರಲಿ, ಆಂಧ್ರದ ಪೂರ್ವಕರಾವಳಿಯಲ್ಲಿ ಎರಡೆರಡು ಬಾರಿ ಬೀಸಿದ ಭಯಾನಕ ಚಂಡಮಾರುತವಿರಲಿ, ಕರ್ನಾಟಕ, ಒರಿಸ್ಸಾ, ಬಿಹಾರ, ಗುಜರಾತ, ರಾಜಸ್ಥಾನ ಮೊದಲಾದ ಕಡೆಗಳಲ್ಲಿ ಬಂದ ಬರಗಾಲವಿರಲಿ, ದೇಶದ ಕೆಲವೆಡೆ ಅತಿವೃಷ್ಟಿಯಿಂದ ಉಂಟಾದ ನೆರೆ ಹಾವಳಿಯಿರಲಿ, ದೇಶದ ಅಲ್ಲಲ್ಲಿ ಸಂಭವಿಸಿದ ರೈಲು ಅಪಘಾತಗಳಿರಲಿ ಅಥವಾ ಹರಿಯಾಣದ ಚರ್ಖಿ-ದಾದ್ರಿಯಲ್ಲಿ ಹಾಗೂ ಬಿಹಾರದ ಪಟ್ನಾದಲ್ಲಿ ಆದ ವಿಮಾನ ದುರ್ಘಟನೆಯಿರಲಿ, ಇಂತಹ ಎಲ್ಲಾ ಪ್ರಸಂಗಗಳಲ್ಲಿ ಪರಿಹಾರ ಕಾರ್ಯಕ್ಕಾಗಿ ಎಲ್ಲರಿಗಿಂತ ಮೊದಲು ಧಾವಿಸಿ ಬಂದವರು ಸಂಘದ ಸ್ವಯಂಸೇವಕರೇ. ಕೆಲವು ಕಡೆಗಳಲ್ಲಂತೂ ಪೋಲೀಸರು ಮತ್ತು ಸೈನಿಕರು ತಲುಪಿದುದು ನಂತರವೇ. ಕೊಳೆತು ದುರ್ನಾತ ಬೀರುತ್ತಿರುವ ಶವಗಳನ್ನು ಸರಿಯಾಗಿ ಸುಡುವ ಅಥವಾ ಹೂಳುವ, ಸತ್ತ ಪ್ರಾಣಿಗಳ ಶವಗಳನ್ನು ಸಹ ಹೂಳುವ - ಎಲ್ಲಾ ವಿಧದ ಕೆಲಸಗಳನ್ನು ಸ್ವಯಂಸೇವಕರನ್ನು ಬಿಟ್ಟು ಇನ್ನಾರೂ ಮಾಡುತ್ತಲೇ ಇರಲಿಲ್ಲ. ಈ ಎಲ್ಲಾ ಪ್ರಸಂಗಗಳ ಹೃದಯಸ್ಪರ್ಶಿ ವರ್ಣನೆಗಳು ಪತ್ರಿಕೆಗಳಲ್ಲಿ ಓದಲು ಲಭಿಸುತ್ತವೆ. ಕೆಲವು ದೃಶ್ಯಗಳನ್ನು ದೂರದರ್ಶನದಲ್ಲೂ ಚಿತ್ರಿಸಲಾಗಿದೆ.

1977ರ ನವೆಂಬರ್‌ನಲ್ಲಿ ಆಂಧ್ರದ ಪೂರ್ವ ಕರಾವಳಿಯಲ್ಲಿ ಬೀಸಿದ ಚಂಡಮಾರುತದ ಪ್ರಸಂಗದಲ್ಲಿ ಪೂರ್ಣವಾಗಿ ಉಧ್ವಸ್ತಗೊಂಡ ಕೃಷ್ಣಾಜಿಲ್ಲೆಯ ಅವನಿಗಡ್ಡ ಗ್ರಾಮವನ್ನು ಸ್ವಯಂಸೇವಕರು ಅತ್ಯಂತ ತನ್ಮಯತೆಯಿಂದ ಪುನರ್‌ರಚಿಸಿದರು. ಅಲ್ಲಿ ಹೊಸದಾಗಿ ಕಟ್ಟಲಾದ ಮನೆಗಳನ್ನು ಅಂದಿನ ಸರಸಂಘಚಾಲಕ ಶ್ರೀ ಬಾಳಾಸಾಹೇಬ ದೇವರಸ್ ಅವರ ಕೈಗಳಿಂದ ಅಲ್ಲಿನ ನಿವಾಸಿಗಳಿಗೆ ಒಪ್ಪಿಸುವ ಕಾರ್ಯಕ್ರಮದಲ್ಲಿ ಆಂಧ್ರದ ಓರ್ವ ಪ್ರಮುಖ ಸರ್ವೋದಯ ನಾಯಕ ಶ್ರೀ ಪ್ರಭಾಕರಜಿ ಅವರು ಸ್ವಯಂಸೇವಕರ ಕೆಲಸವನ್ನು ಕಂಡು ಪ್ರಭಾವಿತರಾಗಿ ಆರ್.ಎಸ್.ಎಸ್. ಎಂದರೆ 'ನಿಃಸ್ವಾರ್ಥ ಸೇವೆಗೆ ಸದಾ ಸಿದ್ಧರು' (Ready for Selfless Service) ಎಂಬ ವ್ಯಾಖ್ಯೆಯನ್ನೇ ಕೊಟ್ಟರು.

## ಜಾತಿಭೇದರಹಿತ ಸೇವಾಕಾರ್ಯ

ಕೆಲವೊಮ್ಮೆ ಜನರು ಸ್ವಯಂಸೇವಕರ ಬಳಿ "ನೀವಂತೂ ಹಿಂದುಗಳಿಗಾಗಿ ಕೆಲಸ ಮಾಡುವವರು. ಹಾಗಿದ್ದಮೇಲೆ ಸೇವಾ ಕಾರ್ಯಗಳನ್ನು ಕೇವಲ ಹಿಂದುಗಳಿಗಾಗಿ ಮಾತ್ರ ಮಾಡುವಿರೇನು?" ಎಂದು ಕೇಳುತ್ತಾರೆ. ಹಾಗೇನಿಲ್ಲ, ಖಂಡಿತವಾಗಿಯೂ ಇಲ್ಲ. ಹಿಂದುಗಳ ಸ್ವಭಾವದಲ್ಲೇ ಅಂತಹ ಸಣ್ಣ ದೃಷ್ಟಿಕೋನವಿಲ್ಲ. ಪೀಡಿತರು, ದುಃಖಿಗಳು ಯಾರೇ ಇರಲಿ, ಅವರೆಲ್ಲರ ಸೇವೆ ಮಾಡುವುದು ಅಗತ್ಯವೇ. ಹರಿಯಾಣದ ಚರ್ಖಿ-ದಾದ್ರಿಯಲ್ಲಿ ನಡೆದ ವಿಮಾನ ದುರ್ಘಟನೆಯ ಉದಾಹರಣೆ ಈ ದೃಷ್ಟಿಯಲ್ಲಿ ತುಂಬ ಉದ್ಬೋಧಕವಾದುದು. ಅದರಲ್ಲಿ ಜಾತೀಯ ಭಾವನೆಗಳನ್ನು ಮೀರಿದ ಸ್ವಯಂಸೇವಕರ ನಿಲುವಿನ ಬಗ್ಗೆ ಎಲ್ಲ ಸಮಾಚಾರ ಪತ್ರಿಕೆಗಳು ಸಾಕಷ್ಟು ವಿವರಿಸಿವೆ. ಅದರಲ್ಲಿ ಸತ್ತವರೆಲ್ಲ ಮುಸಲ್ಮಾನ ಪ್ರಯಾಣಿಕರೇ. ಅವರನ್ನು ಇಸ್ಲಾಂನ ವಿಧಿಗನುಗುಣವಾಗಿ ದಫನ್ ಮಾಡಲು ಯಾವುದೇ ಇಸ್ಲಾಮೀ ಸಂಸ್ಥೆ ಮುಂದಾಗಲಿಲ್ಲ. ಕೊನೆಗೆ ಅಲ್ಲಿಗೆ ಮೌಲ್ವಿಯವರನ್ನು ಕರೆಸಿ ಆರಂಭದಿಂದ ಕೊನೆತನಕ ಎಲ್ಲ ಕೆಲಸಗಳನ್ನು ಮಾಡಿದವರು ಸ್ವಯಂಸೇವಕರೇ. ಸೌದಿ ಅರೇಬಿಯದ ಒಂದು ಸಮಾಚಾರ ಪತ್ರಿಕೆ 'ಅಲ್-ರಿಯಾದ್'ನಲ್ಲಿ 'ಈ ವರೆಗೆ ಆರ್.ಎಸ್.ಎಸ್. ಮುಸ್ಲಿಂ ವಿರೋಧಿ ಸಂಸ್ಥೆ ಎಂಬ ನಮ್ಮ ನಂಬಿಕೆ ಪೂರಾ ತಪ್ಪೆಂದು ಈಗ ನಮ್ಮ ಲಕ್ಷ್ಯಕ್ಕೆ ಬಂದಿದೆ' ಎಂದು ಪ್ರಕಟಿಸಿದೆ. ಗುಜರಾತ್‌ನಲ್ಲಿ ಮಚ್ಚು ಅಣೆಕಟ್ಟು ಒಡೆದಾಗ ನಿರಾಶ್ರಿತರಾದವರಲ್ಲಿ ತುಂಬ ಮಂದಿ ಮುಸಲ್ಮಾನರಿದ್ದರು. ಆಗ ರಮ್ಜಾನ್ ದಿನಗಳು. ನೆರೆಪೀಡಿತರಿಗಾಗಿ ಸ್ವಯಂಸೇವಕರು ನಡೆಸುತ್ತಿದ್ದ ಪರಿಹಾರ ಶಿಬಿರಗಳ ನಿರೀಕ್ಷಣೆಗಾಗಿ ಶ್ರೀವಾಜಪೇಯಿ ಅವರು ಹೋಗಿದ್ದರು. ಅಲ್ಲಿನ ಹಲವಾರು ಮುಸಲ್ಮಾನರು ಅವರನ್ನು ಕಂಡು

ತಮ್ಮ ಕೃತಜ್ಞತೆ ವ್ಯಕ್ತಪಡಿಸುತ್ತ "ಸಂಘದವರು ರಮ್ಜಾನ್ ವಿಧಿಗನುಗುಣವಾಗಿ ನಮಗೆಲ್ಲ ಊಟ-ತಿಂಡಿ ಮತ್ತು ನಮಾಜ್‌ಗಾಗಿಯೂ ಎಲ್ಲ ವ್ಯವಸ್ಥೆಗಳನ್ನು ಉತ್ತಮವಾಗಿ ಮಾಡಿದ್ದಾರೆ" ಎಂದು ತಿಳಿಸಿದ್ದರು.

## ಯುದ್ಧಗಳು ನಡೆದಾಗ

ಯುದ್ಧಗಳಾದಾಗ ಸೇವಾ ಕಾರ್ಯಗಳು ಇನ್ನೊಂದು ವಿಧದಲ್ಲಿ ಅತ್ಯಂತ ಮಹತ್ವಪೂರ್ಣವೆನಿಸುತ್ತವೆ. 1962ರಲ್ಲಿ ಭಾರತದ ಈಶಾನ್ಯ ದಿಕ್ಕಿನಲ್ಲಿ ಚೀನದ ಆಕ್ರಮಣ ಅನಿರೀಕ್ಷಿತವಾಗಿ ಆಯಿತು. ಆ ದಿನಗಳಲ್ಲಿ ಸರಕಾರದ ಯುದ್ಧ ಪ್ರಯತ್ನಗಳಿಗೆಲ್ಲ ದೇಶಾದ್ಯಂತ ಜನಸಮರ್ಥನೆ ಸಿಗುವಂತೆ ಮಾಡಲು ಸಂಘದ ಸ್ವಯಂಸೇವಕರು ನಿರ್ವಹಿಸಿದ ಪಾತ್ರವನ್ನು ಪ್ರತ್ಯಕ್ಷ ಕಂಡು ಪಂ. ನೆಹರು ಅವರು ಸಹ ಪ್ರಭಾವಿತರಾದರು. 1963ರ ಗಣರಾಜ್ಯ ದಿನೋತ್ಸವದ (26. 1. 1963) ಪೆರೇಡ್‌ನಲ್ಲಿ ಪಾಲ್ಗೊಳ್ಳುವಂತೆ ಅವರು ಸಂಘಕ್ಕೆ ಆಹ್ವಾನವಿತ್ತರು. ಕೇವಲ ಮೂರು ದಿನಗಳ ಪೂರ್ವಸೂಚನೆ ಮಾತ್ರದಿಂದ 3000 ಸ್ವಯಂಸೇವಕರು ಸಂಘದ ಗಣವೇಷದಲ್ಲಿ ಆ ವರ್ಷದ ಪೆರೇಡ್‌ನಲ್ಲಿ ನಡೆಸಿದ ಭವ್ಯ ಪಥ ಸಂಚಲನ ವೀಕ್ಷಕರಿಗೆಲ್ಲ ಪ್ರಮುಖ ಆಕರ್ಷಣೆಯಾಯಿತು. 1965ರಲ್ಲಿ ಪಾಕಿಸ್ತಾನದ ಆಕ್ರಮಣವಾದಾಗ ಪ್ರಧಾನಿ ಲಾಲಬಹದ್ದೂರ್ ಶಾಸ್ತ್ರಿಯವರ ಆಹ್ವಾನದ ಮೇರೆಗೆ ದೇಶದ ವಿವಿಧ ಪಕ್ಷಗಳ ನಾಯಕರ ಸಭೆಗೆ ಶ್ರೀಗುರೂಜಿಯವರು ಹೋಗಿದ್ದರು. ಅಲ್ಲಿ ಯುದ್ಧ ನೀತಿಯನ್ನು ನಿರೂಪಿಸುವ ಚರ್ಚೆಯಲ್ಲಿ ಶ್ರೀಗುರೂಜಿಯವರು ಮಂಡಿಸಿದ ವಿಚಾರಗಳು ಸಾಕಷ್ಟು ಮಾರ್ಗದರ್ಶಕವೆನಿಸಿದವು. ಪುನಃ 1971ರಲ್ಲಿ ಬಾಂಗ್ಲಾದೇಶದ ಮುಕ್ತಿ ಸಂಗ್ರಾಮದಲ್ಲೂ ಸ್ವಯಂಸೇವಕರ ಪಾತ್ರ ತುಂಬ ಪ್ರಭಾವಿಯಾಗಿತ್ತು.

ಇತ್ತೀಚಿಗೆ ಆದ ಕಾರ್ಗಿಲ್ ಯುದ್ಧದ ವರೆಗೂ ಪ್ರತಿಯೊಂದು ಯುದ್ಧದಲ್ಲೂ ದೇಶದ ಜನತೆಯ ಮನೋಬಲವನ್ನು ಬೆಳೆಸುವುದು, ರೈತರು, ಕಾರ್ಮಿಕರು ಉತ್ಪಾದನೆಯನ್ನು ಹೆಚ್ಚಿಸುವಂತೆ ಅವರಿಗೆ ಪ್ರೇರಣೆ ನೀಡುವುದು, ದೇಶದ ಒಳಗೆ ಆಂತರಿಕ ಶತ್ರುಗಳ ಬಗ್ಗೆ ಜನರನ್ನು ಎಚ್ಚರಗೊಳಿಸುವುದು, ಗಾಯಾಳು ಸೈನಿಕರಿಗೆ ತುರ್ತು ರಕ್ತದಾನದ ವ್ಯವಸ್ಥೆ ಮಾಡುವುದು, ಅವರ ಸೇವೆ ಶುಶ್ರೂಷೆಗಾಗಿ ತತ್ಪರರಾಗುವುದು, ಪ್ರತ್ಯಕ್ಷ ಯುದ್ಧರಂಗದಲ್ಲಿ ಹೋರಾಡುತ್ತಿರುವವರಿಗೆ ಊಟ ತಿಂಡಿ ಮತ್ತು ಕೆಲವೊಮ್ಮೆ ಶಸ್ತ್ರಾಸ್ತ್ರಗಳನ್ನು ತಲಪಿಸುವುದು - ಇಂತಹ ಎಲ್ಲ ಕೆಲಸಗಳಲ್ಲೂ ಸ್ವಯಂಸೇವಕರು ತನು ಮನ ಧನಪೂರ್ವಕ ತೊಡಗಿರುತ್ತಾರೆ. ಯುದ್ಧಗಳ ಸಂದರ್ಭದಲ್ಲಿ ಸೇನೆಗೆ ಜನರಿಂದ ಸರ್ವವಿಧ ಸಹಕಾರವನ್ನು ಒದಗಿಸುವುದು ಅಗತ್ಯವಾಗುತ್ತದೆ. ಈ ಪವಿತ್ರ ಹೊಣೆಯನ್ನು ಸಂಘದ ಸ್ವಯಂಸೇವಕರು ಯಶಸ್ವಿಯಾಗಿ ನಿಭಾಯಿಸುವುದನ್ನು ಕಂಡು ಸಾಮಾನ್ಯ ಸೈನಿಕರಿರಲಿ, ಹಿರಿಯ ಸೇನಾಧಿಕಾರಿಗಳು ಸಹ ಸಂಘದವರು ತಮಗೆ ಪರಮಮಿತ್ರರು ಎಂದು ತಿಳಿಯಲಾರಂಭಿಸಿದ್ದಾರೆ. ಜಮ್ಮುವಿನಲ್ಲಿ ಈಗಲೂ ಭಾರತದ ವಿರುದ್ಧ ಪಾಕಿಸ್ತಾನದ ಅಘೋಷಿತ ಯುದ್ಧ ನಡೆದೇ ಇದೆ. ಅಲ್ಲಿನ ನಮ್ಮ ಸೇನೆಗೆ ಸ್ವಯಂಸೇವಕರಿಂದ ಸರ್ವವಿಧ ಸಹಕಾರ ಮತ್ತು ನೆರವು ನೀಡಲಾಗುತ್ತಿದೆ.

## ಭಾರತದ ಗಡಿ ರಕ್ಷಣೆ

ಭಾರತದ ಗಡಿಗಳ ಕೇವಲ ರಕ್ಷಣೆಯಷ್ಟೇ ಅಲ್ಲ, 1947ರ ಅಕ್ಟೋಬರ್‌ನಲ್ಲಿ ಕೊನೆಯ ವಾರದಲ್ಲಾದ ಪಾಕಿಸ್ತಾನದ ಆಕ್ರಮಣದಿಂದ ಜಮ್ಮುಕಾಶ್ಮೀರವನ್ನು ಉಳಿಸುವ ಸಲುವಾಗಿ ನಮ್ಮ ವಿಮಾನಗಳು ಶ್ರೀನಗರ ವಿಮಾನ ನಿಲ್ದಾಣದಲ್ಲಿ ಇಳಿಯಲು ಸಾಧ್ಯವಾದುದು ಸಹ ಆ ನಿಲ್ದಾಣದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಹಿಮವನ್ನು 48 ಗಂಟೆಗಳ ಕಾಲ 500 ಸ್ವಯಂಸೇವಕರು ಹಗಲು ರಾತ್ರಿ ಎನ್ನದೆ ಪರಿಶ್ರಮಿಸಿ ಗುಡಿಸಿ ಪ್ರಶಸ್ತಗೊಳಿಸಿದ ಕಾರಣವೇ.

ಚೀನದ ಆಕ್ರಮಣದ 8-10 ವರ್ಷಗಳ ಮೊದಲು ಸ್ವತಃ ಶ್ರೀಗುರೂಜಿಯವರೇ ಅದು ಯಾವ ರೀತಿ ಸದ್ದಿಲ್ಲದೆ ಉತ್ತರ ಮತ್ತು ಈಶಾನ್ಯ ಗಡಿಗಳಲ್ಲಿ ಹೆಜ್ಜೆ ಹೆಜ್ಜೆಯಾಗಿ ಮುಂದುವರಿಯುತ್ತಿದೆ ಎಂಬುದನ್ನು ತಿಳಿಸಿ ಎಚ್ಚರಿಕೆಯ ಗಂಟೆ ಬಾರಿಸಿದ್ದರು. ಆ ಮೂಲಕ ಸಂಪೂರ್ಣ ರಾಷ್ಟ್ರ ಮತ್ತು ರಾಷ್ಟ್ರದ ನಾಯಕರನ್ನು ಅವರು ಎಚ್ಚರಿಸಿದ್ದರು. ಆದರೆ ಆಗ ದೇಶದ ನಾಯಕರು 'ಹಿಂದಿ ಚೀನೀ ಭಾಯಿ ಭಾಯಿ' ಮತ್ತು 'ಪಂಚಶೀಲ' ದ ಘೋಷಣೆಗಳ ಗುಂಗಿನಲ್ಲಿದ್ದರು.

## ದಾದ್ರ - ನಗರ ಹವೇಲಿ ಮುಕ್ತಿ

ಭಾರತದಲ್ಲಿ ಇಂಗ್ಲಿಷರ ಆಳ್ವಿಕೆ ದೂರವಾದ ಮೇಲೂ ದಾದ್ರ ಮತ್ತು ನಗರ ಹವೇಲಿ ಮೇಲೆ ಫ್ರೆಂಚರ ಹಾಗೂ ಗೋವಾದಲ್ಲಿ ಪೋರ್ತುಗೀಸರ ಆಡಳಿತ ಮುಂದುವರಿದಿತ್ತು. ಸಂಘದ ಸ್ವಯಂಸೇವಕರು ಅವನ್ನೂ ಮುಕ್ತಗೊಳಿಸುವ ಸವಾಲು ಸ್ವೀಕರಿಸಿದರು. 1954ರ ಆಗಸ್ಟ್ 2ರಂದು ನೂರು ಮಂದಿ ಶಸ್ತ್ರಧಾರಿ ಸ್ವಯಂಸೇವಕರು ದಾದ್ರ-ನಗರ ಹವೇಲಿ ಮೇಲೆ ಆಕ್ರಮಣ ಮಾಡಿದಾಗ ಅಲ್ಲಿನ ವಿದೇಶಿ ಆಡಳಿತಗಾರರು ಗಾಬರಿಗೊಂಡರು. ವಿರೋಧಿಸುವ ಧೈರ್ಯವೇ ಅವರಲ್ಲಿ ಉಳಿಯಲಿಲ್ಲ. ಹೀಗಾಗಿ ಒಂದು ತೊಟ್ಟು ರಕ್ತವೂ ಹರಿಯದೆ ಸ್ವಯಂಸೇವಕರು ಗೆದ್ದರು. ನಂತರ ಆ ಸ್ವಯಂಸೇವಕರು ಅಲ್ಲಿ ತ್ರಿವರ್ಣಧ್ವಜವನ್ನು ಹಾರಾಡಿಸಿ ಭಾರತೀಯ ಉಚ್ಚ ಅಧಿಕಾರಿಗಳ ಕೈಗಳಿಗೆ ಅಲ್ಲಿನ ಆಡಳಿತವನ್ನು ಒಪ್ಪಿಸಿದರು.

## ಗೋವಾದ ಮುಕ್ತಿಗಾಗಿ ಬಲಿದಾನ

ಆದರೆ ಗೋವಾದ ಮುಕ್ತಿಗಾಗಿ 1961ರ ವರೆಗೆ ವ್ಯಾಪಕವಾದ ಹೋರಾಟ ನಡೆಸಬೇಕಾಯಿತು. ದೇಶದ ಮೂಲೆಮೂಲೆಗಳಲ್ಲಿನ ಸಾವಿರಾರು ಸ್ಥಾನಗಳಿಂದ ಅಸಂಖ್ಯ ಸ್ವಾತಂತ್ರ್ಯ ಪ್ರೇಮಿ ಜನರು ಗೋವಾದ ಗಡಿಯಿಂದ ಒಳಗೆ ಪ್ರವೇಶ ಮಾಡಲಾರಂಭಿಸಿದರು. ಅವರ ಮೇಲೆ ಅತ್ಯಾಚಾರಿ ಪೋರ್ತುಗೀಸ್ ಸೈನಿಕರು ಲಾಠಿ ಪ್ರಹಾರ, ಗುಂಡೇಟು ಪ್ರಯೋಗ ಇತ್ಯಾದಿ ನಡೆಸತೊಡಗಿದರು. ತಮ್ಮ ಸೆರೆಮನೆಗಳಲ್ಲಿ ಈ ಹೋರಾಟಗಾರರಿಗೆ ಅಮಾನವೀಯ ಶಾರೀರಿಕ ಯಾತನೆ ನೀಡಿದರು. ಉಜ್ಜೈನಿಯ ರಾಜಾಭಾವೂ ಮಹಾಕಾಲ ಹೆಸರಿನ ಓರ್ವ ಸ್ವಯಂಸೇವಕ ಒಂದು ಕೈಯಲ್ಲಿ ತ್ರಿವರ್ಣ ಧ್ವಜ ಸಹಿತ, ಪೋರ್ತುಗೀಸರ ಗುಂಡೇಟಿಗೆ ಜಗ್ಗದೆ ಮುನ್ನುಗ್ಗಿ ತನ್ನ ಆತ್ಮಾಹುತಿ ನೀಡಿದ. ನೆಲಕ್ಕುರುಳುವಾಗಲೂ ಆತನ ಕೈಯಲ್ಲಿ ತ್ರಿವರ್ಣ ಧ್ವಜವಿತ್ತು. ಈ ರೀತಿ ಗೋವಾ ವಿಮುಕ್ತಿಗಾಗಿ ಸಂಘರ್ಷದ ವಾತಾವರಣ ಬಿಸಿಯೇರಿದಾಗ ಕೇಂದ್ರ ಸರಕಾರವೂ ಗೋವಾದ ಬಿಡುಗಡೆಗಾಗಿ ಪೋಲಿಸ್ ಕಾರ್ಯಾಚರಣೆ ಕೈಗೊಳ್ಳಲು ಮುಂದೆ ಬರಬೇಕಾಯಿತು. ಸಂಘದ ಸ್ವಯಂಸೇವಕರಲ್ಲದೆ ಈ ಆಂದೋಲನದಲ್ಲಿ ಭಾರತೀಯ ಜನಸಂಘ ಮತ್ತು ಸಮಾಜವಾದಿ ಕಾರ್ಯಕರ್ತರು ಸಹ ಭಾಗವಹಿಸಿದ್ದರು. ಈ ಆಂದೋಲನದ ಎಲ್ಲ ಯೋಜನೆಯನ್ನು ಮಾಡಿ, ಯಶಸ್ವಿಯಾಗಿ ಅದನ್ನು ನಿರ್ವಹಿಸಿದವರು ಸಂಘದ ಸ್ವಯಂಸೇವಕರೇ ಎಂಬುದನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲವಲ್ಲ.

## ಬಲಿದಾನಗಳ ಕೊಂಡಿ

ದೇಶವಿಭಜನೆಯಾದಾಗ ಪಾಕಿಸ್ತಾನವಾದ ಪ್ರದೇಶದಲ್ಲಿ ಉಳಿದಿದ್ದ ಲಕ್ಷಾಂತರ ಅಸಹಾಯ ಹಿಂದು ಬಂಧುಗಳನ್ನು ಸುರಕ್ಷಿತವಾಗಿ ಭಾರತಕ್ಕೆ ಕರೆದುಕೊಂಡು ಬರುವುದೇ ಒಂದು ಭಾರೀ ಪ್ರಯಾಸದ ಹಾಗೂ ಸಾಹಸದ ಕೆಲಸವಾಗಿತ್ತು. ಆ ದಿನಗಳಲ್ಲಿ ಅಲ್ಲಿನ ಸ್ವಯಂಸೇವಕರು ನಿರ್ವಹಿಸಿದ ಪಾತ್ರ ಭಾರತದ ಸ್ವರಾಜ್ಯ ಪ್ರಾಪ್ತಿಯ ಇತಿಹಾಸದ ಅಧ್ಯಾಯದಲ್ಲಿ ಅಪ್ರತಿಮ ತ್ಯಾಗ, ಶೌರ್ಯ, ಬಲಿದಾನಗಳ ಒಂದು ರೋಮಾಂಚಕಾರಿ ಪುಟವೇ ಆಗಿದೆ. ಶತ್ರು ಸೈನಿಕರು, ಶತ್ರು

ಪೋಲೀಸರು ಮತ್ತು ಶತ್ರುಜನತೆ ಇವರ ಆಕ್ರಮಣಗಳಿಗೆ ಒಳಗಾಗಿ ಸಿಖ್ಖರನ್ನು ಒಳಗೊಂಡು ಲಕ್ಷಾಂತರ ಹಿಂದು ಬಂಧು ಭಗಿನಿಯರು ತಮ್ಮ ಮನೆಮಠ ಕಳೆದು ಬೀದಿಪಾಲಾಗಿದ್ದರು. ಅವರೆಲ್ಲರನ್ನು ಉಳಿಸುವ ಸಲುವಾಗಿ ಅಕ್ಷರಶಃ ನೂರಾರು ಸಂಘದ ಕಾರ್ಯಕರ್ತರು ತಮ್ಮ ಪ್ರಾಣದಾಹುತಿ ನೀಡಿದರು. ನಮ್ಮ ನೂರಾರು ಮಾತಾ ಭಗಿನಿಯರು ತಮ್ಮ ಮಾನದ ರಕ್ಷಣೆಗಾಗಿ ವಿಷಸೇವನೆ ಮಾಡಿದರು, ಬಾವಿಗೆ ಹಾರಿದರು. ತಮ್ಮ ಸ್ವಂತ ತಂದೆ, ಸೋದರರ ಕೈಗಳಿಂದ ತಮ್ಮ ತಲೆ ಕತ್ತರಿಸಿಕೊಂಡರು. ಇಂತಹ ಒಂದು ಅಸಾಮಾನ್ಯ ಯುದ್ಧದ ಅತ್ಯಂತ ಭೀಷಣ ಪರಿಸ್ಥಿತಿಯಲ್ಲಿ ಸ್ವಯಂಸೇವಕರು ತೋರಿದ ಸಾಹಸ, ಧೈರ್ಯ ಮತ್ತು ಕಾರ್ಯಕುಶಲತೆ, ಅದಕ್ಕೂ ಮಿಗಿಲಾಗಿ ನಗುನಗುತ್ತ ತಮ್ಮ ಪ್ರಾಣವನ್ನೇ ಬಲಿವೇದಿಯ ಮೇಲೆ ಆಹುತಿಗೊಳಿಸಿದುದು ಸಂಪೂರ್ಣ ವಿಶ್ವದ ಯುದ್ಧಸಂಬಂಧಿತ ಇತಿಹಾಸದಲ್ಲಿ ಒಂದು ಅಭೂತಪೂರ್ವ ದಾಖಲೆಯೇ ಆಗಿದೆ.

1947ರಲ್ಲಿ ಪಾಕಿಸ್ತಾನದ ತೋಪುಗಳು ಗುಂಡಿನ ಮಳೆಗರೆಯುತ್ತಿರುವಾಗಲೂ ಅದರ ನಡುವೆ ಜಮ್ಮುವಿನ ಗಡಿ ಪಟ್ಟಣ ರಾಜೌರಿಯ ರಕ್ಷಣೆಯಲ್ಲಿ ಅಲ್ಲಿನ ನಗರ ಕಾರ್ಯವಾಹ ತನ್ನ ಜೀವನದ ಕೊನೆಯ ಕ್ಷಣದವರೆಗೂ ಹೋರಾಡಿ, ತನ್ನ ಆತ್ಮಾಹುತಿಯಾದರೂ ರಾಜೌರಿಯನ್ನು ರಕ್ಷಿಸಿದುದು; 1962ರಲ್ಲಿ ಚೀನದ ಆಕ್ರಮಣವಾದಾಗ ಉತ್ತರ ಅಸ್ಸಾಮಿನ ನಗರ ತೇಜಪುರದ ಜಿಲ್ಲಾಧಿಕಾರಿ ಸಹಿತ ಎಲ್ಲ ಅಧಿಕಾರಿಗಳು, ಅಲ್ಲಿನ ಜನರಿಗೆ ಸುರಕ್ಷಿತ ಪ್ರದೇಶಗಳಿಗೆ ಹೋಗುವಂತೆ ತಿಳಿಸಿ, ಸರಕಾರಿ ಖಜಾನೆಯಲ್ಲಿನ ಹಣವನ್ನು ಕೆರೆಯಲ್ಲಿ ಎಸೆದು ಸ್ವತಃ ಪರಾರಿಯಾದಾಗ, ಆ ನಗರದ ಸ್ವಯಂಸೇವಕರು ಇನ್ನೂ ಹಲವಾರು ದೇಶಭಕ್ತ ನಾಗರಿಕರನ್ನು ಜತೆಗೂಡಿಸಿ ಆ ಹಣವನ್ನು ಉಳಿಸಿದುದಲ್ಲದೆ, ತೇಜಪುರದ ರಕ್ಷಣೆಗಾಗಿಯೂ ಹಗಲುರಾತ್ರಿ ಪರಿಶ್ರಮಿಸಿದುದು; 1971ರಲ್ಲಿ ಬಾಂಗ್ಲಾದೇಶದ ವಿಮೋಚನಾ ಸಮರದಲ್ಲಿ, ಆ ದೇಶದ ಗಡಿಗೆ ಸಮೀಪವಿರುವ ಭಾರತದ ಪಶ್ಚಿಮ ದಿನಾಜಪುರ ಜಿಲ್ಲೆಯ ಚಕ್ರಮ ಗ್ರಾಮ ಶಾಖೆಯ ಮುಖ್ಯ ಶಿಕ್ಷಕ ಚುರ್ಕಾಮುರ್ಮು ತನ್ನ ಶರೀರಕ್ಕೆ ಹಗ್ಗ ಕಟ್ಟಿ ಗುಂಡಿನ ಮಳೆಯ ನಡುವೆ ನೆಲದಲ್ಲಿ ತೆವಳುತ್ತ ಕೆರೆಯಲ್ಲಿ ಬಿದ್ದಿರುವ ನಮ್ಮವರ ಶಸ್ತ್ರಾಸ್ತ್ರಗಳ ಪೆಟ್ಟಿಗೆಗಳನ್ನು ಸುರಕ್ಷಿತವಾಗಿ ನಮ್ಮ ಸೈನಿಕರಿಗೆ ತಲುಪಿಸುತ್ತ ವೀರಗತಿಯನ್ನೈದುದು - ಇಂತಹ ಲೆಕ್ಕವಿಲ್ಲದಷ್ಟು ರೋಮಾಂಚಕಾರಿ ಪ್ರಸಂಗಗಳನ್ನು ಈಗಲೂ ನೆನಪಿಸಬಹುದು.

## ಅದೇನು ವಿಶೇಷ ಶಿಕ್ಷಣ ?

ದೇಶ ವಿಭಜನೆಯಾದಾಗ ಮತ್ತು ಅದಾದ ಕೂಡಲೇ 1947ರ ಅಕ್ಟೋಬರ್‌ನಲ್ಲಿ ಜಮ್ಮುಕಾಶ್ಮೀರದಲ್ಲಾದ ಅನಿರೀಕ್ಷಿತ ಪಾಕ್ ಆಕ್ರಮಣದ ಪ್ರಸಂಗದಲ್ಲಿ ಸ್ವಯಂಸೇವಕರು ತೋರಿದ ಅಪ್ರತಿಮ ಸಾಹಸ ಮತ್ತು ಬಲಿದಾನದ ರಣಪಟುತ್ವವನ್ನು ಓರ್ವ ಉಚ್ಚ ಸೇನಾಧಿಕಾರಿ ಚೆನ್ನಾಗಿ ಅರಿತಿದ್ದರು. 1950ರಲ್ಲಿ ಶ್ರೀಗುರೂಜಿಯವರು ಪಂಜಾಬಿಗೆ ಪ್ರವಾಸಕ್ಕಾಗಿ ಬಂದಾಗ ಆ ಸೇನಾಧಿಕಾರಿಯವರು ಬಂದು ಅವರ ಭೇಟಿಯಾಗಿ ಶ್ರದ್ಧೆಯಿಂದ ನಮಸ್ಕರಿಸುತ್ತಾ "ಕೆಲವೊಮ್ಮೆ ನಮ್ಮ ಸೈನಿಕರು ಸಹ ವೈರಿಯ ಜತೆ ಪ್ರತ್ಯಕ್ಷ ಎದುರಾಗಲು (ಸಾವಿನ ಸಂಭವವಿರುವ ಕಾರಣ) ಹಿಂದೇಟು ಹಾಕುವುದುಂಟು. ಆದರೆ ಅಂತಹ ಪ್ರಸಂಗದಲ್ಲೂ ನಿಮ್ಮ ಸ್ವಯಂಸೇವಕರು ಮುನ್ನುಗ್ಗುತ್ತಿದ್ದರಲ್ಲ, ಅದಕ್ಕಾಗಿ ನೀವು ಅದೆಂತಹ ವಿಶೇಷ ಶಿಕ್ಷಣ ನೀಡಿದ್ದೀರಿ?" ಎಂದು ಕೇಳಿದರು. ಶ್ರೀಗುರೂಜಿಯವರು ನಗುತ್ತ "ಕಬಡ್ಡಿ!" ಎಂದರು. ತದನಂತರ ಶ್ರೀಗುರೂಜಿಯವರು "ಶಾಖೆಯಲ್ಲಿ ದೇಶಭಕ್ತಿ, ಸಮಾಜಪ್ರೇಮ, ಅನುಶಾಸನ ಇತ್ಯಾದಿಗುಣಗಳ ಸಂಸ್ಕಾರ ಲಭಿಸುತ್ತದೆ. ಇಲ್ಲಿ ಸಿಗುವ ಶಿಕ್ಷಣ ಅದೊಂದೇ. ಇನ್ನಾವ ವಿಧದ ಸೈನಿಕ ಶಿಕ್ಷಣವನ್ನು ಸಂಘದಲ್ಲಿ ನೀಡಲಾಗುವುದಿಲ್ಲ" ಎಂದು ವಿವರಿಸಿದರು. ಯುದ್ಧ ಮಾಡುವುದು ಶಸ್ತ್ರವಲ್ಲ,

ಶಸ್ತ್ರವನ್ನು ಹಿಡಿದ ಕೈಗಳು ; ಆ ಕೈಗಳೂ ಅಲ್ಲ, ಅವುಗಳ ಹಿಂದಿರುವ ಹೃದಯ ಎಂಬ ಮಾತಿನಲ್ಲಿರುವ ಸತ್ಯ ಇಂತಹ ಪ್ರಸಂಗಗಳಲ್ಲಿ ಸ್ವಯಂಸೇವಕರ ನಡವಳಿಕೆಯಿಂದ ಕಣ್ಣಿಗೆ ಕಾಣುವಂತೆ ಹೊಮ್ಮುತ್ತದೆ.

## ರಾಷ್ಟ್ರೀಯ ಮಾನಬಿಂದುಗಳ ಬಗ್ಗೆ ಶ್ರದ್ಧೆಯ ಜಾಗರಣ

ರಾಷ್ಟ್ರದ ಜಾಗರಣ ಮತ್ತು ಅದರ ಸಂಘಟನೆಯ ಈ ದೇಶವ್ಯಾಪಿ ಕಾರ್ಯವಲ್ಲದೆ, ನಡುನಡುವೆ ಸಂಘದ ಸ್ವಯಂಸೇವಕರು ಭಾರೀ ಪ್ರಮಾಣದಲ್ಲಿ ವಿಶೇಷ ರೀತಿಯ ರಾಷ್ಟ್ರವ್ಯಾಪಿ ಜನಾಂದೋಲನಗಳನ್ನೂ ನಡೆಸುತ್ತಾರೆ. ಇವೆಲ್ಲದರಲ್ಲಿ ಒಂದು ಮಹಾ ಉದ್ದೇಶವಿರುತ್ತದೆ - ನಮ್ಮ ಸಮಾಜದ ಅತ್ಯಂತ ಶ್ರದ್ಧಾಸ್ಪದ ಮಾನಬಿಂದುಗಳ ರಕ್ಷಣೆ ಹಾಗೂ ಅವುಗಳ ಕುರಿತು ಜನರ ಮನದಲ್ಲಿ ಸಮುಚಿತವಾದ ವಿಚಾರ ಮತ್ತು ಭಾವನೆಗಳು ಜಾಗೃತವಾಗಬೇಕು ಎಂಬುದು.

## ಗೋರಕ್ಷಾ ಆಂದೋಲನ

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ದೀರ್ಘ ಕಾಲಾವಧಿಯಲ್ಲಿ ಗೋರಕ್ಷೆಯ ಪ್ರಶ್ನೆ ನಿರಂತರವಾಗಿ ಪ್ರಾಮುಖ್ಯತೆ ಪಡೆದಿತ್ತು. ಇಸ್ಲಾಮೀ ಮತ್ತು ಕ್ರೈಸ್ತ ಆಕ್ರಮಣಕಾರಿಗಳು ಇಲ್ಲಿನ ಜನರ ತೇಜೋಭಂಗ ಮಾಡುವ ಸಲುವಾಗಿಯೇ ಗೋಹತ್ಯೆಯನ್ನು ಆರಂಭಿಸಿದ್ದರು. ಹೀಗಾಗಿ ಸ್ವಾತಂತ್ರ್ಯ ಹೋರಾಟದ ಎಲ್ಲ ಸೇನಾನಿಗಳು ಭಾರತವು ಸ್ವತಂತ್ರವಾದ ಮೇಲೆ ಮೊಟ್ಟಮೊದಲ ಕಾನೂನು ಗೋಹತ್ಯೆಯ ಮೇಲೆ ನಿಷೇಧ ಹೊರಿಸುವಿಕೆ ಎಂದಿದ್ದರು. ಗಾಂಧೀಜಿಯವರಂತೂ "ಸ್ವರಾಜ್ಯ ಪ್ರಾಪ್ತಿಗಿಂತ ಗೋರಕ್ಷೆಯ ವಿಚಾರವನ್ನು ಹೆಚ್ಚು ಮಹತ್ವದ್ದಾಗಿ ನಾನು ತಿಳಿಯುತ್ತೇನೆ" ಎಂದಿದ್ದರು. ಆದರೆ ಇಂಗ್ಲೀಷರು ಇಲ್ಲಿಂದ ತೆರಳಿದ ನಂತರವೂ ಭಾರತದಲ್ಲಿ ಗೋಹತ್ಯೆ ಮುಂದುವರಿಯಿತಷ್ಟೇ ಅಲ್ಲ, ಇನ್ನಷ್ಟು ಹೆಚ್ಚಿತು.

ಅದಕ್ಕಾಗಿ 1952ರಲ್ಲಿ ಶ್ರೀಗುರೂಜಿಯವರ ಮಾರ್ಗದರ್ಶನದಂತೆ ಗೋವಧೆಯನ್ನು ನಿಷೇಧಿಸುವಂತಹ ಬೇಡಿಕೆಗೆ ಬೆಂಬಲ ನೀಡಿ ಸ್ವಯಂಸೇವಕರು ದೇಶಾದ್ಯಂತ ಸುಮಾರು 1.74 ಕೋಟಿ ವಯಸ್ಕರ ಹಸ್ತಾಕ್ಷರಗಳನ್ನು ಸಂಗ್ರಹಿಸಿದರು. ನಂತರ ಈ ಮನವಿಯನ್ನು ಆಗಿನ ರಾಷ್ಟ್ರಪತಿ ಡಾ|| ರಾಜೇಂದ್ರ ಪ್ರಸಾದಜಿ ಅವರ ಕೈಗಳಿಗೆ ಒಪ್ಪಿಸಿದರು. ಆ ದಿನಗಳಲ್ಲಿ ಸಾವಿರಾರು ಸಂಖ್ಯೆಯಲ್ಲಿ ಮುಸಲ್ಮಾನರು ಮತ್ತು ಕ್ರೈಸ್ತರು ಸಹ ಮನವಿಗೆ ಹಸ್ತಾಕ್ಷರ ನೀಡಿದ ಆನಂದದಾಯಕ ಅನುಭವ ಬಂದಿತ್ತು. ಅವರ ಕೆಲವು ಪ್ರಮುಖರು, ಈ ಬೇಡಿಕೆಯನ್ನು ಸಮರ್ಥಿಸಿ ಹೇಳಿಕೆಯನ್ನೂ ಕೊಟ್ಟಿದ್ದರು. ಆದರೆ ಈ ರಾಷ್ಟ್ರೀಯ ಬೇಡಿಕೆಯನ್ನು ಸರಕಾರವು ಪೂರ್ಣವಾಗಿ ಅಲಕ್ಷಿಸಿದುದು ದೇಶದ ದೌರ್ಭಾಗ್ಯ. ಸ್ವಾತಂತ್ರ್ಯಪೂರ್ವದಲ್ಲಿ ಕೆಲವು ಹಿಂದು ಸಂಸ್ಥಾನಗಳಲ್ಲಿ ಗೋಹತ್ಯೆಯ ಮೇಲೆ ಪೂರಾ ನಿಷೇಧವಿತ್ತು. ಅದನ್ನು ಸಹ ದುರ್ಬಲಗೊಳಿಸಲಾದುದು ನಿಜಕ್ಕೂ ದೇಶದ ದುರದೃಷ್ಟವೇ. ಕಳೆದ ಕೆಲವು ವರ್ಷಗಳಿಂದಂತೂ ಭಾರೀ ಭಾರೀ ಯಾಂತ್ರಿಕ ಕಸಾಯಿಖಾನೆಗಳೇ ಆರಂಭವಾಗಿದ್ದು, ಅವುಗಳಲ್ಲಿ ಸ್ವಾತಂತ್ರ್ಯಪೂರ್ವದ ಹೋಲಿಕೆಯಲ್ಲಿ ನೂರುಪಟ್ಟು ಹೆಚ್ಚು ಗೋಹತ್ಯೆ ನಡೆಯುತ್ತಿದೆ. ಈಗ ಈ ಗೋಪೂಜಕ ಗೋಪಾಲಕೃಷ್ಣನ ಭೂಮಿಯಲ್ಲಿ ಗೋವಂಶದ ಸರ್ವನಾಶವಾಗಬಹುದೇನೋ ಎನಿಸುವಷ್ಟು ಭಯ ಆವರಿಸತೊಡಗಿದೆ. ಅದಕ್ಕಾಗಿ ಈ ಅಪಾಯವನ್ನು ತಡೆಯಲು ಮತ್ತು ಈ ಘೋರ ಪಾಪದಿಂದ ದೇಶವನ್ನು ಉಳಿಸಲು ಈಗಲೂ ನಿರಂತರವಾಗಿ ಗೋರಕ್ಷೆಯ ವಿಷಯದಲ್ಲಿ ಅನೇಕವಿಧ ಪ್ರಯತ್ನಗಳು ನಡೆದೇ ಇವೆ. ಈ ಪುಣ್ಯಕಾರ್ಯದಲ್ಲಿ ಹಲವಾರು ಸಾಧು ಸಂತರು ಮುಂದಾಗಿದ್ದಾರೆ. ಕಾಂಚಿಯ ಜಗದ್ಗುರು ಶಂಕರಾಚಾರ್ಯ ಪೂಜ್ಯ ಶ್ರೀ ಜಯೇಂದ್ರ ಸರಸ್ವತಿ ಅವರು ಈ ವಿಷಯವನ್ನು ಕೈಗೆತ್ತಿಕೊಂಡ ಕಾರಣ ಈಗ ಈ ಆಂದೋಲನದ ರಭಸ ಹೆಚ್ಚಿದೆ.

## ವಿವೇಕಾನಂದ ಶಿಲಾಸ್ಮಾರಕದ ನಿರ್ಮಾಣ

1962ರಲ್ಲಿ ಚೀನದ ಜತೆ ನಡೆದ ಯುದ್ಧದಲ್ಲಿ ಆದ ದಯನೀಯ ಸೋಲಿನಿಂದಾಗಿ, ಭಾರತದ ಜನಮಾನಸಕ್ಕೆ ಭಾರೀ ದುಃಖ ಹಾಗೂ ಆಘಾತವೂ ಆಗಿತ್ತು. ಆ ದಿನಗಳಲ್ಲಿ ಭಾರತದ ಆತ್ಮವನ್ನು ತನ್ನ ಸ್ವಭಾವಸಹಜ ತೇಜಸ್ಸಿನೊಂದಿಗೆ ಬಡಿದೆಬ್ಬಿಸುವಂತಹ ಕಾರ್ಯಕ್ರಮವೊಂದು ಅತ್ಯಗತ್ಯವಾಗಿ ಬೇಕಾಗಿತ್ತು. ಅದಕ್ಕಾಗಿ ಜನಜಾಗರಣದ ಅಭಿಯಾನವು ಯೋಜಿತವಾಯಿತು. ಮರುವರ್ಷ 1963ರಲ್ಲಿ ಸ್ವಾಮಿ ವಿವೇಕಾನಂದರ ಜನ್ಮಶತಮಾನೋತ್ಸವದ ಶುಭ ಪ್ರಸಂಗವೊಂದು ಒದಗಿಬಂದು ಅಂದಿನ ಅಭಿಯಾನಕ್ಕಾಗಿ ಅತ್ಯನುಕೂಲವಾದ ಪ್ರೇರಕ ವಿಷಯವಾಗಿ ಪ್ರಾಪ್ತವಾದುದು ಒಂದು ದೈವೀ ಸಂಧಿ ಎಂದೇ ಹೇಳಬೇಕು. ಸ್ವಾಮಿ ವಿವೇಕಾನಂದರು ಅಮೆರಿಕಕ್ಕೆ ಹೋಗುವ ಮೊದಲು ಮೂರು ದಿನಗಳ ಕಾಲ ಕನ್ಯಾಕುಮಾರಿಯ ದಡದಿಂದ ದೂರದಲ್ಲಿ ಸಮುದ್ರದ ನಡುವೆ ಇರುವ ಒಂದು ಬಂಡೆಯ ಮೇಲೆ ಕುಳಿತು ಭಾರತದ ಭವಿಷ್ಯದ ಬಗ್ಗೆ ತನ್ಮಯರಾಗಿ ಚಿಂತಿಸಿದ್ದರು, ಅಲ್ಲಿಯೇ, ಅವರು ತಮ್ಮ ಮುಂದಿನ ಕಾರ್ಯದ ಬಗ್ಗೆ ನಿರ್ಧಾರವನ್ನೂ ಮಾಡಿದರು. ಅದಕ್ಕಾಗಿ ಆ ಪವಿತ್ರ, ರಾಷ್ಟ್ರೀಯ ಮಹತ್ವವಿರುವ ಬಂಡೆಯ ಮೇಲೆ ಸ್ವಾಮಿ ವಿವೇಕಾನಂದರ ಒಂದು ಭವ್ಯ ಸ್ಮಾರಕ ನಿರ್ಮಾಣ ಮಾಡುವ ನಿರ್ಧಾರ ಕೈಗೊಳ್ಳಲಾಯಿತು.

ಈ ಕಾರ್ಯದ ಮಹತ್ವವನ್ನು ಲಕ್ಷ್ಯದಲ್ಲಿರಿಸಿ ಪೂರ್ವ ಸರಕಾರ್ಯವಾಹ ಶ್ರೀ ಏಕನಾಥಜೀ ರಾನಡೆ ಅವರನ್ನು ಈ ಕಾರ್ಯಕ್ಕಾಗಿಯೇ ಬೇರೆಲ್ಲ ಜವಾಬ್ದಾರಿಗಳಿಂದ ಬಿಡುಗಡೆಗೊಳಿಸಲಾಯಿತು. ಕ್ರೈಸ್ತರಿಂದ ಈ ಯೋಜನೆಗೆ ಅಡ್ಡಗಾಲು ಹಾಕಲು ಹಲವು ವಿಧ ಪ್ರಯತ್ನಗಳೂ ನಡೆದವು. ಆದರೆ ತಮ್ಮ ಅಸಾಮಾನ್ಯ ಕುಶಲತೆ ಹಾಗೂ ಜಿದ್ದಿನ ಪ್ರಯತ್ನದ ಮೂಲಕ ಇನ್ನೂ ಹಲವು ವಿಧ ಅಡಚಣೆಗಳನ್ನು ನಿವಾರಿಸಿ ಏಕನಾಥಜೀ ಅವರು ವಿವೇಕಾನಂದ ಶಿಲಾಸ್ಮಾರಕದ ಕೆಲಸವನ್ನು ಆರಂಭಿಸುವುದರಲ್ಲಿ ಸಫಲರಾದರು. ಈ ಸ್ಮಾರಕದ ಕೆಲಸಕ್ಕಾಗಿ ಅಗತ್ಯವಿರುವಷ್ಟು ಹಣವನ್ನು ಸ್ವಯಂಸೇವಕರು ದೇಶಾದ್ಯಂತ ವ್ಯಾಪಕ ಪ್ರಮಾಣದಲ್ಲಿ ಜನಸಂಪರ್ಕದ ಅಭಿಯಾನ ನಡೆಸಿ ಸಂಗ್ರಹಿಸಿದರು. ಕೆಲವು ಹಿತೈಷಿ ಶ್ರೀಮಂತರು ಮತ್ತು ರಾಜ್ಯ ಸರಕಾರಗಳೂ ತಮ್ಮ ನೆರವಿನ ಹಸ್ತ ಚಾಚಿದರು. ಧನಸಂಗ್ರಹದ ಜತೆಯಲ್ಲೇ ರಾಷ್ಟ್ರವನ್ನು ಎಚ್ಚರಿಸುವ ವಿವೇಕಾನಂದರ ಸಂದೇಶವನ್ನು ದೇಶದ ಸಾವಿರಾರು ಶಾಲೆ ಕಾಲೇಜುಗಳಲ್ಲಿ ಪ್ರಭಾವೀ ಭಾಷಣಗಳ ಮೂಲಕ ಸ್ವಯಂಸೇವಕರು ಒಯ್ದರು. ಸ್ವಾಮಿಜೀಯವರ ಪ್ರೇರಕ ವಿಚಾರಗಳಿಂದ ಕೂಡಿದ ಕಿರುಹೊತ್ತಿಗೆಗಳೂ ಎಲ್ಲ ಭಾಷೆಗಳಲ್ಲಿ ಪ್ರಕಟಗೊಂಡು ಮನೆಮನೆಗಳಿಗೂ ತಲುಪಿದವು. ಕಟ್ಟಕಡೆಯಲ್ಲಿ ಅಭಿಯಾನದ ಸುಖಪ್ರದ ಮುಕ್ತಾಯವಾಗಿ ಭವ್ಯ ವಿವೇಕಾನಂದ ಸ್ಮಾರಕವು, ಕನ್ಯಾಕುಮಾರಿಯಲ್ಲಿನ ಸಮುದ್ರದ ನಡುಬಂಡೆಯ ಮೇಲೆ ಒಂದು ರಾಷ್ಟ್ರೀಯ ಪ್ರೇರಣೆಯ ದೀಪಸ್ತಂಭದಂತೆ 1970ರಲ್ಲಿ ಎದ್ದುನಿಂತಿತು. ಅದೀಗ ಭಾರತದ ಒಂದು ಶ್ರೇಷ್ಠ ತೀರ್ಥಸ್ಥಾನವೇ ಆಗಿದೆ. ಪ್ರತಿವರ್ಷವೂ ಲಕ್ಷಾಂತರ ಯಾತ್ರಿಕರಿಗೆ ಅದು ಆಕರ್ಷಣೆಯ ಕೇಂದ್ರವಾಗಿದೆ.

## ಏಕಾತ್ಮತಾ ಯಾತ್ರೆಗಳು

ಭಾರತಮಾತೆ ಮತ್ತು ಗಂಗೆ ಈ ದೇಶದ ಕೋಟ್ಯಂತರ ಜನರಿಗೆ ತಮ್ಮ ಸಾಂಸ್ಕೃತಿಕ ಏಕತೆ ಮತ್ತು ಪಾವಿತ್ರ್ಯದ ಶ್ರದ್ಧಾಕೇಂದ್ರಗಳಾಗಿವೆ. ಗಂಗೆಯ ಪವಿತ್ರ ಜಲವನ್ನು ದೇಶದ ಮೂಲೆಮೂಲೆಗಳಲ್ಲಿರುವ ಜನರ ವರೆಗೆ ತಲುಪಿಸುವ ಸಲುವಾಗಿ ವಿಶ್ವಹಿಂದು ಪರಿಷತ್ತು 1983ರ ನವೆಂಬರದಲ್ಲಿ ಒಂದು ಭಾರೀ ಯೋಜನೆಯನ್ನು ರೂಪಿಸಿತು. ಈ ಯೋಜನೆಯಂತೆ

ಭಾರತಮಾತೆಯ ಪ್ರತಿಮೆ ಹಾಗೂ ಗಂಗಾಜಲದ ಕುಂಭಗಳ ಸಹಿತ ಎರಡು ಸಾವಿರಕ್ಕೂ ಮೀರಿ ರಥಯಾತ್ರೆಗಳು ಹೊರಟವು. ಮುಖ್ಯವಾಗಿ ಮೂರು ಪ್ರಮುಖ ಯಾತ್ರೆಗಳು, ಉಳಿದೆಲ್ಲ ಉಪಯಾತ್ರೆಗಳನ್ನು ಸೇರಿಸಿ ದೇಶದಲ್ಲಿ 50,000 ಕಿ.ಮೀ. ದೂರದ ರಸ್ತೆಯನ್ನು ಕ್ರಮಿಸಿ ಮೂರು ಲಕ್ಷ ಗ್ರಾಮಗಳಲ್ಲಿನ ಹತ್ತುಕೋಟಿ ಜನರವರೆಗೆ ತಲುಪಿದವು.

ಅದೇ ರೀತಿ ಗೋಮಾತೆಯ ಕುರಿತು ಶ್ರದ್ಧೆಯ ಜಾಗರಣಕ್ಕಾಗಿ 1995ರಲ್ಲಿ ಅಕ್ಟೋಬರ್-ನವೆಂಬರ್‌ನಲ್ಲಿ ಭಾರತ ಮಾತೆ, ಗಂಗಾಮಾತೆ ಹಾಗೂ ಗೋಮಾತೆಯ ಪ್ರತಿಮೆಯನ್ನಿರಿಸಿಕೊಂಡು ಒಟ್ಟು 1726 ರಥಯಾತ್ರೆಗಳು ನಡೆದವು. ಈ ಮಾಧ್ಯಮದ ಮೂಲಕ ದೇಶದಲ್ಲಿನ 1,73,797 ಸ್ಥಾನಗಳಲ್ಲಿ ವಿಶಾಲ ಸಾರ್ವಜನಿಕ ಸಭೆಗಳನ್ನು ನಡೆಸಿ 11,88,00,000 ಜನರನ್ನು ಸಂಪರ್ಕಿಸಲಾಯಿತು.

## ಅಯೋಧ್ಯಾರಾಮಮಂದಿರ ಆಂದೋಲನ

ರಾಮಶಿಲಾ ಪೂಜನ, ರಾಮಜ್ಯೋತಿ ಯಾತ್ರೆಗಳಲ್ಲಿ ಲಕ್ಷಾಂತರ ಗ್ರಾಮೀಣ ಜನರು ಭಾಗವಹಿಸಿದರು. ಅಯೋಧ್ಯೆಯಲ್ಲಿನ ರಾಮಜನ್ಮಭೂಮಿಯಲ್ಲಾದ ಶಿಲಾನ್ಯಾಸ, ನಂತರ ರಾಮಮಂದಿರದ ನಿರ್ಮಾಣಕ್ಕಾಗಿ ಆದ ಸೇವೆ - ಕಾರಸೇವೆಯ - ಐತಿಹಾಸಿಕ ಪ್ರಸಂಗ, ಅದರಲ್ಲಿ ಕೆಲವು ರಾಮಭಕ್ತರ ಬಲಿದಾನ - ಇವೆಲ್ಲವುಗಳ ರೋಮಾಂಚಕಾರಿ ವರ್ಣನೆ ಈಗ ಭಾರತದ ಇತ್ತೀಚಿನ ಇತಿಹಾಸದ ಸ್ವರ್ಣಿಮ ಪುಟಗಳೇ ಆಗಿವೆ. ಈ ಬೃಹತ್ ಕಾರ್ಯಕ್ರಮಗಳಿಗೆಲ್ಲ, ಸ್ವಯಂಸೇವಕರು ತುಂಬುಮನದಿಂದ ವಿಶ್ವಹಿಂದು ಪರಿಷತ್ತಿನೊಂದಿಗೆ ಸಹಕರಿಸಿದರು.

## ಡಾಕ್ಟರ್ ಹೆಡಗೇವಾರ್ ಜನ್ಮಶತಮಾನೋತ್ಸವ ಸಂದರ್ಭ

1989ರಲ್ಲಿ ಸಂಘಸಂಸ್ಥಾಪಕ ಡಾಕ್ಟರ್ ಹೆಡಗೇವಾರರ ಜನ್ಮಶತಮಾನೋತ್ಸವದ ಸುಯೋಗ ಲಭಿಸಿತು. ಇದು ಕೇವಲ ಸ್ವಯಂಸೇವಕರಿಗಷ್ಟೇ ಅಲ್ಲ, ಹಿಂದುತ್ವಪ್ರೇಮಿಗಳಿಗೆಲ್ಲ ಒಂದು ಅತ್ಯಂತ ಆನಂದ ಮತ್ತು ಉತ್ಸಾಹದ ಪ್ರಸಂಗವಾಗಿತ್ತು. ವಿವಿಧ ಪ್ರಾಂತಗಳ ಸಂಘದ ಕಾರ್ಯಕರ್ತರು ಈ ಅಭಿಯಾನದಲ್ಲಿ ದೇಶದ 2,16,284 ಗ್ರಾಮಗಳಿಗೆ ಹೋದರು. ದೇಶದಲ್ಲಿ ವ್ಯಕ್ತಿಗತ ರೀತಿಯಲ್ಲಿ ಅತಿ ಹೆಚ್ಚಿನ ಗ್ರಾಮಗಳ ಸಂಪರ್ಕ ಮಾಡಿದಂತಹ ದಾಖಲೆ ಸರ್ವಕಾಲಿಕ ಸರ್ವೋಚ್ಚ ಎನ್ನಬಹುದು. ಈ ಜನಸಂಪರ್ಕ ಅಭಿಯಾನದಲ್ಲಿ 1,48,70,682 ಪರಿವಾರಗಳೊಂದಿಗೆ ವ್ಯಕ್ತಿಗತ ನೆಲೆಯಲ್ಲಿ ಸಂಪರ್ಕ ಬೆಳೆಯಿತು.

## ವಿಭಿನ್ನ ಸಂಘಟನೆಗಳ ಭೂಮಿಕೆ

ಶಾಖೆಗಳಲ್ಲಿ ಸಂಸ್ಕಾರಿತರಾದ ಸ್ವಯಂಸೇವಕರು ನಮ್ಮ ರಾಷ್ಟ್ರದ ಪುನರ್ನಿರ್ಮಾಣದ ಎಲ್ಲ ರಂಗಗಳಲ್ಲೂ ಏಳ್ಗೆ ತರುವರು ಎಂದು ಡಾಕ್ಟರ್ ಹೆಡಗೇವಾರರು ಹೇಳಿರುವ ಮಾತಿಗೆ ಸೇವಾಕಾರ್ಯಗಳ ಹೊರತಾಗಿ ಇನ್ನೂ ಒಂದು ಆಯಾಮವಿದೆ, ವಿದ್ಯಾರ್ಥಿ, ಶಿಕ್ಷಣ, ಅಧ್ಯಾಪಕ, ಕಾರ್ಮಿಕ, ಕಿಸಾನ, ವನವಾಸಿ ಇತ್ಯಾದಿ ಕ್ಷೇತ್ರಗಳಲ್ಲದೆ. ಧರ್ಮ, ಕಲೆ, ಸ್ವದೇಶಿ, ರಾಜಕಾರಣ ಇತ್ಯಾದಿ ವಿಭಿನ್ನ ರಂಗಗಳಲ್ಲೂ ಸ್ವಯಂಸೇವಕರು ಭಾರೀಪ್ರಮಾಣದ ಪ್ರಭಾವಿಯಾದ ಸಂಘಟನೆಗಳನ್ನು ಸ್ವತಂತ್ರವಾಗಿ ಕಟ್ಟನಿಲ್ಲಿಸಿದ್ದಾರೆ. ಇದಲ್ಲದೆ ಮಹಿಳೆಯರಲ್ಲೂ ಪ್ರತ್ಯೇಕವಾದ ಸ್ವತಂತ್ರ ಸಂಘಟನೆಯೊಂದು ಈಗ ಕಾರ್ಯಾರಂಭ ಮಾಡಿದೆ. ಇಂತಹ ಎಲ್ಲ ಸಂಘಟನೆಗಳು ತಂತಮ್ಮ ಕ್ಷೇತ್ರಗಳಲ್ಲಿ ದೇಶದಲ್ಲೆ ಅತಿ ದೊಡ್ಡ ಹಾಗೂ ಪ್ರಭಾವಿಯಾದ ಸಂಘಟನೆಗಳಾಗಿಬಿಟ್ಟಿವೆ.

ಉದಾಹರಣೆಗಾಗಿ ಅಖಿಲಭಾರತೀಯ ವಿದ್ಯಾರ್ಥಿ ಪರಿಷತ್ತು, ಭಾರತೀಯ ಮಜದೂರ ಸಂಘ, ಭಾರತೀಯ ಕಿಸಾನ ಸಂಘ, ವಿದ್ಯಾಭಾರತಿ, ವನವಾಸಿ ಕಲ್ಯಾಣ ಆಶ್ರಮ, ಸ್ವದೇಶಿ ಜಾಗರಣ ಮಂಚ್, ವಿಶ್ವಹಿಂದು ಪರಿಷತ್ ಮೊದಲಾದವು. ಇವೆಲ್ಲ ಸಂಘಟನೆಗಳು ಸಂಘದಿಂದ ಪ್ರತ್ಯೇಕವಾಗಿ, ಸ್ವತಂತ್ರವಾಗಿ ಕೆಲಸ ಮಾಡುವಂತಹವು ಆಗಿದ್ದರೂ, ಸಂಘದಲ್ಲಿ ಗಳಿಸಿರುವ ಪರಿಶುದ್ಧವಾದ ರಾಷ್ಟ್ರೀಯತೆಯ ವಿಚಾರ, ಅನುಶಾಸನ, ಸಾಮರಸ್ಯದಿಂದ ಕೂಡಿದ ಸಹಕಾರ, ಪ್ರಾಮಾಣಿಕತೆ, ಸಮರ್ಪಣಾ ಮನೋಭಾವ ಇತ್ಯಾದಿ ಸದ್ಗುಣಗಳ ಸಂಸ್ಕಾರ ಅವುಗಳಲ್ಲೂ ಕಾಣಸಿಗುತ್ತವೆ. ಜತೆಯಲ್ಲಿ ತಂತಮ್ಮ ಕ್ಷೇತ್ರಗಳಲ್ಲಿ ಭಾರತೀಯ ಜೀವನ ಮೌಲ್ಯಗಳನ್ನು ಪುನಃ ಬೆಳೆಸುವ ಪ್ರಯತ್ನಗಳೂ ಅಲ್ಲಿ ಆಗುತ್ತವೆ. ಇವೆಲ್ಲ ಸಂಘಟನೆಗಳಲ್ಲಿ ಸಮಾನವಾಗಿರುವ ಇನ್ನೊಂದು ಮಹತ್ವದ ಉದ್ದೇಶವೆಂದರೆ ತಮ್ಮ ಪ್ರಭಾವಕ್ಕೊಳಗಾಗುವ ಬಂಧು ಭಗಿನಿಯರ ಶಕ್ತಿ, ಪ್ರತಿಭೆ, ಅನುಭವ ಮೊದಲಾದವನ್ನು ಸಂಘಟಿತರೂಪದಲ್ಲಿ ದೇಶಭಕ್ತ ಜನಶಕ್ತಿಯನ್ನು ಬೆಳೆಸುವ ಸಲುವಾಗಿಯೇ ಸಮರ್ಪಿತಗೊಳಿಸುವುದು. ನಮ್ಮ ರಾಷ್ಟ್ರೀಯ ಜೀವನದ ಅನುಪಮ ವಿಶೇಷತೆ ಇರುವುದೇ ಇದರಲ್ಲಿ. ಅದು ಎಂದೂ ಸಹ ರಾಜಶಕ್ತಿ ಕೇಂದ್ರಿತವಾಗಿ ಇರಲಿಲ್ಲ. ಈಗಲೂ ಈ ವಿಶೇಷತೆಯ ಪುನಃಸ್ಥಾಪನೆಗಾಗಿಯೇ ಇವೆಲ್ಲ ಸಂಘಟನೆಗಳು ಸರಕಾರದ ಕೃಪೆ ಅಥವಾ ಅನುಗ್ರಹದ ಮೇಲೆ ಅವಲಂಬಿತವಾಗಿಯೇ ಇಲ್ಲ. ಜನರ ಸಹಕಾರದ ಕಾರಣವೇ ಇವು ಉಳಿಯುತ್ತವೆ, ಬೆಳೆಯುತ್ತಲೂ ಇವೆ. ಎಲ್ಲ ಸಂಘಟನೆಗಳ ಒಟ್ಟುಗೂಡಿದ ಪ್ರಯತ್ನದ ಪರಿಣಾಮವಾಗಿ ಸಂಪೂರ್ಣ ರಾಷ್ಟ್ರಜೀವನವನ್ನು ಸದಾ ಜಾಗ್ರತ, ಕರ್ತವ್ಯನಿಷ್ಠ, ಅನುಶಾಸಿತ ಮತ್ತು ಸ್ವಾವಲಂಬಿಯಾಗಿ ಮಾಡುವುದು ಇದೇ ಸಂಘದ ಲಕ್ಷ್ಯವಾಗಿದೆ. ಹಾಗಾದಾಗ ಮಾತ್ರ ರಾಷ್ಟ್ರಜೀವನದ ಎಲ್ಲ ಅಂಗಗಳು ಈಗಿರುವಂತೆ ರಾಜಕೀಯದ ಮತ್ತು ರಾಜಶಕ್ತಿಯ ಅಂಕುಶದಲ್ಲಿರುವ ಸ್ಥಿತಿ ಬದಲಾಗಿ ಜನತೆಯ ಶಕ್ತಿಯೇ ಸರಕಾರದ ಮೇಲೆ ಅಂಕುಶ ಬಿಗಿಯಬಲ್ಲದಾಗುತ್ತದೆ.

## ಇತಿಹಾಸದಿಂದ ಪಾಠ ಕಲಿಯೋಣ

ಈಗ ಇನ್ನೊಂದು ಪ್ರಶ್ನೆ ಮನದಲ್ಲೇಳುತ್ತದೆ. "ಇಂತಹ ಸಂಘಟನೆಯನ್ನು ಕಟ್ಟಿಬೆಳೆಸಿದ ಮತ್ತು ಸೇವಾಕಾರ್ಯ ಮಾಡಿದ ಮಾತ್ರದಿಂದ ದೇಶದ ಸರ್ವತೋಮುಖ ಉದ್ಧಾರವಾಗುವುದೇನು? ದೇಶದ ಮುಂದೆ ಇಷ್ಟೊಂದು ವಿಭಿನ್ನ ರೀತಿಯ ಜಟಿಲ ಸಮಸ್ಯೆಗಳು, ಭೀಕರ ಸವಾಲುಗಳಿರುವಾಗ ಅವೆಲ್ಲವುಗಳ ಪರಿಹಾರವೂ ಆಗುವುದೇನು? ಸಂಘದ ಸಂಸ್ಥಾಪಕರು ಈ ಬಗ್ಗೆ ಏನಾದರೂ ಯೋಚಿಸಿದ್ದರೇ?" ನಿಮ್ಮ ಸಂಶಯ ಖಂಡಿತವಾಗಿಯೂ ಸರಿಯಾದುದು, ತುಂಬ ಮಹತ್ವದ್ದು ಸಹ.

ಡಾಕ್ಟರ್ ಹೆಡಗೇವಾರರು ಓರ್ವ ಆಳವಾದ ಚಿಂತಕರಾಗಿದ್ದರು. ಸ್ವಾತಂತ್ರ್ಯದ ಹೋರಾಟದಲ್ಲಿ ಎಲ್ಲಾ ರೀತಿಯ ರಾಷ್ಟ್ರೀಯ ಜಾಗರಣದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಮಾತ್ರದಿಂದ ಸಮಾಧಾನ ಪಡುವವರು ಆಗಿರಲಿಲ್ಲ ಅವರು. ತಮ್ಮ ಚೂಪಾದ, ಚಿಕಿತ್ಸಕೀಯ ಬುದ್ಧಿಯಿಂದ ಅಂದಿನ ಎಲ್ಲ ವಿಧ ಪ್ರಯತ್ನಗಳ ಗುಣದೋಷಗಳನ್ನು ಅವರು ಪರಿಚಯಿಸಿಕೊಂಡಿದ್ದರು. ಜತೆಯಲ್ಲಿ ನಮ್ಮ ದೇಶದ ಇತಿಹಾಸದ ಆಳವಾದ ಅಧ್ಯಯನವನ್ನೂ ಅವರು ಮಾಡಿದ್ದರು. ಹೀಗಾಗಿ ಅವರು ಅಂತರ್ಮುಖರಾಗಿ ಯೋಚಿಸುತ್ತಿದ್ದಾಗ, ಅವರ ಮನದಲ್ಲಿ ಎದ್ದ ಮೊದಲ ಪ್ರಶ್ನೆಯೆಂದರೆ "ಇಂದಿನ ಈ ದಟ್ಟ ದಾರಿದ್ರ್ಯದ ಗುಲಾಮತನದ ಸ್ಥಿತಿಗೆ ನಾವೇಕೆ ಬಂದೆವು? ನಮ್ಮ ಈ ದೇಶ ಮೊದಲಿಂದಲೂ ಇದೇ ರೀತಿ ಕಳಪೆಯಾಗಿತ್ತೇನು?" ಈ ಪ್ರಶ್ನೆಗೆ ನಮ್ಮ ಇತಿಹಾಸವೇ ಸ್ಪಷ್ಟ ಉತ್ತರವನ್ನು ನೀಡಿದೆ.

ನಮ್ಮ ದೇಶದ ಪತನ, ವಿಶೇಷವಾಗಿ ಕಳೆದ ಒಂದು ಸಾವಿರ ವರ್ಷಗಳ ಕಾಲಾವಧಿಯಲ್ಲಿ ಕ್ರಮಕ್ರಮವಾಗಿ ಆಗುತ್ತಾ ಬಂತು. ಅದಕ್ಕಿಂತ ಮೊದಲು ಹಲವಾರು ಸಾವಿರ ವರ್ಷಗಳ ಕಾಲ ಇದೇ ದೇಶವು ವಿಶ್ವದಲ್ಲೆ ಅತ್ಯಂತ ಸುಶಿಕ್ಷಿತ, ಸಮೃದ್ಧ, ಜ್ಞಾನವಿಜ್ಞಾನ ಧರ್ಮ ಸಂಸ್ಕೃತಿಗಳಲ್ಲಿ ಮುಂದುವರಿದ ರಾಷ್ಟ್ರವಾಗಿತ್ತು. ಆಷ್ಟಾದರೂ ವಿದೇಶಿ ಆಕ್ರಮಣಗಳ ಮುಂದೆ ನಾವೇಕೆ ಸೋತೆವು? ಅವರಿಗೆ ನಾವು ದಾಸರಾದೆವೇಕೆ? ನಮ್ಮಲ್ಲಿ ಸೇನೆ ಇರಲಿಲ್ಲವೇನು? ನಮ್ಮ ಸೈನಿಕರಲ್ಲಿ ಪರಾಕ್ರಮವಿರಲಿಲ್ಲವೇನು? ಜನಸಂಖ್ಯೆಯಲ್ಲಿ ನಾವು ಕಡಿಮೆ ಇದ್ದೆವೇನು? ಇವೆಲ್ಲ ಪ್ರಶ್ನೆಗಳಿಗೆ ನಮ್ಮ ಇತಿಹಾಸವು ನೀಡುವ ಸ್ಪಷ್ಟ ಉತ್ತರವೆಂದರೆ, ನಾವು ಯಾವುದೇ ಕ್ಷೇತ್ರದಲ್ಲೂ ಹಿಂದಿದ್ದವರಲ್ಲ. ನಿಜಕ್ಕೂ ಇವೆಲ್ಲ ಸಂಗತಿಗಳಲ್ಲಿ ನಾವು ಎಲ್ಲರಿಗಿಂತ ಹಲವು ಪಟ್ಟು ಮುಂದುವರಿದಿದ್ದೆವು.

ಕೆಲವೊಮ್ಮೆ ಯುದ್ಧದ ವ್ಯೂಹರಚನೆಯಲ್ಲಿ, ಆಧುನಿಕ ಶಸ್ತ್ರಾಸ್ತ್ರಗಳ ಬಳಕೆಯಲ್ಲಿ ನಮ್ಮ ಸೇನೆ ಹಿಂದುಳಿದಿತ್ತು ಎಂಬುದು ನಿಜವೇ. ಹಲವು ಬಾರಿ ಶತ್ರುಗಳ ಕುಟಿಲತೆ, ಧೂರ್ತತೆ, ಬರ್ಬರತೆಗಳನ್ನು ನಾವರಿಯದಾದೆವು ಎಂಬುದರಲ್ಲೂ ಸತ್ಯಾಂಶ ಇಲ್ಲದಿಲ್ಲ. ಎಲ್ಲರೂ ನಮ್ಮಂತೆಯೇ ಸತ್ಯನಿಷ್ಠರಿರಬಹುದು, ಧರ್ಮಯುದ್ಧದ ನಿಯಮಗಳಿಗನುಗುಣವಾಗಿಯೇ ಹೋರಾಡುವವರಿರಬಹುದು ಇತ್ಯಾದಿ ಭ್ರಮೆಗಳಿಗೆ ನಾವು ಬಲಿಯಾಗಿದ್ದೆವು.

ನಮ್ಮ ಜನರು ಇದಕ್ಕಿಂತ ಭಯಾನಕವಾದ ಇನ್ನೊಂದು ಭ್ರಮೆಗೂ ಒಳಗಾಗಿದ್ದರು. ಕ್ರೈಸ್ತ ಮತ್ತು ಮುಸಲ್ಮಾನ ಆಕ್ರಮಣಕಾರರು ನಮ್ಮ ರೀತಿಯಲ್ಲೆ ಸ್ವಭಾವತಃ ಧಾರ್ಮಿಕ ಮನೋವೃತ್ತಿಯವರು, ನಮ್ಮ ಮತ್ತು ಅವರ ಧಾರ್ಮಿಕ ನಂಬಿಕೆಗಳು ಒಂದೇ ವಿಧದವು, ಅವರು ಸಹ ನಮ್ಮಂತೆಯೇ ಸಹನೆಯ ಹಾಗೂ ಉದಾರತೆಯ ಸ್ವಭಾವದವರು, ಅವರಿಗೂ ನಮಗೂ ಇರುವ ವ್ಯತ್ಯಾಸವೆಂದರೆ ಪೂಜಾ ಪದ್ಧತಿಗಳಲ್ಲಿ ಮಾತ್ರ-ಈ ರೀತಿ ತಿಳಿದು ನಾವು ನಡೆದುಕೊಂಡೆವು. ನಮ್ಮವರೇ ಆಗಿರುವವರು ಇಂತಹ ವಿದೇಶಿ ಮತಗಳಿಗೆ ಬಲಿಯಾದ ನಂತರ ಅವರಿಗೆ ನಮ್ಮ ದೇಶದ ಬಗ್ಗೆ ನಿಷ್ಠೆ ಉಳಿಯುವುದಿಲ್ಲ, ಅವರ ಸಂಖ್ಯೆ ಬೆಳೆದಾಗ ನಮ್ಮ ರಾಷ್ಟ್ರ ಜೀವನವೇ ನಾಶವಾಗುವುದು ಇತ್ಯಾದಿ ಸಂಗತಿಗಳ ಬಗ್ಗೆ ನಮಗೆಚ್ಚರವೇ ಇರಲಿಲ್ಲ.

## ಎಲ್ಲಕ್ಕಿಂತ ಮುಖ್ಯಕಾರಣ - ಅಸಂಘಟನೆ

ಆದರೆ ಇವೆಲ್ಲಕ್ಕಿಂತ ದೊಡ್ಡದಾದ ಬಹು ಮುಖ್ಯ ಕಾರಣವೆಂದರೆ ನಮ್ಮ ಸಮಾಜದ ಅಸಂಘಟಿತ ಸ್ಥಿತಿ. ಈ ನಮ್ಮ ದೇಶವು ಧರ್ಮಭೂಮಿ, ಕರ್ಮಭೂಮಿ, ಪುಣ್ಯಭೂಮಿ, ಮೋಕ್ಷಭೂಮಿ ಇತ್ಯಾದಿ ಶ್ರದ್ಧೆಯೇನೋ ನಮ್ಮ ಸಮಾಜದ ಮನದಲ್ಲಿ ಕೂರಿ ಕೂರಿ ತುಂಬಿತ್ತು. ದೇಶದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ, ನಾಲ್ದೆಸೆಗಳಲ್ಲೂ ತೀರ್ಥಯಾತ್ರೆಗಳಾಗುತ್ತಿದ್ದವು. ಕುಂಭಮೇಳದಂತಹ ಪ್ರಸಂಗಗಳಲ್ಲಿ ದಟ್ಟ ಅರಣ್ಯಗಳಿಂದ, ಗಿರಿ ಪರ್ವತಗಳಿಂದ ಮೊದಲ್ಗೊಂಡು ಸಂಪೂರ್ಣ ದೇಶದ ಉದ್ದಗಲದಿಂದ ಶ್ರದ್ಧಾಳು ಜನರು ಒಂದುಗೂಡಿ ಬರುತ್ತಿದ್ದರು. ಆದರೆ ನಮ್ಮ ರಾಷ್ಟ್ರ ಜೀವನಕ್ಕೆ ಈ ಭೂಮಿಯೇ ನಮಗೆ ಆಧಾರ, ಇದೇ ನಮ್ಮ ರಾಷ್ಟ್ರ, ಇದರ ಏಕತೆ ಹಾಗೂ ಸಮಗ್ರತೆಯ ರಕ್ಷಣೆ ಮಾಡಬೇಕಾದುದು ನಮ್ಮ ಮೊಟ್ಟಮೊದಲ ಧರ್ಮ ಎಂಬ ಸತ್ಯದ ಅರಿವು ನಮ್ಮ ಮನದಿಂದ ಮರೆಯಾಗಿತ್ತು. ಬ್ರಿಟಿಷರು ಇಲ್ಲಿಗೆ ಬಂದ ಮೇಲೆ ಅವರ ಕುಟಿಲ ಪ್ರಚಾರದಿಂದಾಗಿ ಇನ್ನೊಂದು ವಿಧದ ವ್ಯಾಮರೆವು ನಮ್ಮಲ್ಲಿನ ಶಿಕ್ಷಿತರನ್ನು ಆವರಿಸಿತು. ನಾವಾರು? ನಮ್ಮ ರಾಷ್ಟ್ರದ ಹೆಸರೇನು ? ನಮ್ಮ ರಾಷ್ಟ್ರೀಯತೆ ಯಾವುದು? ಈ ಎಲ್ಲ ಮೂಲಭೂತ ಸಂಗತಿಗಳನ್ನು ಸಹ ತಾನೇ ಅಲ್ಲಗಳೆಯುವಂತಹ ವಿಚಾರ ಶಿಕ್ಷಿತರ ಮನದಲ್ಲಿ ನೆಲೆಸಿತು.

## ಡಾಕ್ಟರ್ ಹೆಡಗೇವಾರರ ಸರಿಯಾದ ನಿಷ್ಕರ್ಷೆ

ಹೀಗಾಗಿ ನಮ್ಮ ಅಧಃಪತನದ ಈ ಮೂಲದೋಷವನ್ನು ಸರಿಪಡಿಸದೆ ನಮ್ಮ ಸಮಾಜವು ಸ್ವತಂತ್ರವಾಗದು, ಮತ್ತು ದೇಶಕ್ಕೆ ಕವಿದಿರುವ ಸಂಕಟಗಳೂ ದೂರವಾಗವು ಎಂಬ ನಿಷ್ಕರ್ಷೆಗೆ ಡಾಕ್ಟರ್ ಹೆಡಗೇವಾರರು ತಲಪಿದರು.

ಆ ದಿನಗಳಲ್ಲಿ ಆಂಗ್ಲರ ಕಪಿಮುಷ್ಟಿಯಿಂದ ದೇಶವು ಬಿಡುಗಡೆಯಾಗುವುದೆಂತು ಎಂಬುದೇ ಎಲ್ಲ ಆಂದೋಲನಗಳ ಮುಖ್ಯ ಬಿಂದುವಾಗಿರುತ್ತಿತ್ತು. ಅದಕ್ಕಾಗಿ ದೇಶದ ಪತನಕ್ಕೆ ಕಾರಣ ಯಾವುದು? ಅದನ್ನು ದೂರಗೊಳಿಸುವ ಉಪಾಯವೇನು? ಈ ನಿಟ್ಟಿನಲ್ಲಿ ಮೂಲಭೂತವಾಗಿ ಯೋಚಿಸುವಷ್ಟು ಮನಃಸ್ಥಿತಿಯೂ ಯಾರಲ್ಲೂ ಇರಲಿಲ್ಲ. ಸ್ವರಾಜ್ಯಪ್ರಾಪ್ತಿಗಾಗಿ ನಡೆಯುತ್ತಿದ್ದ ಹೋರಾಟದಲ್ಲಿ ಮುಸಲ್ಮಾನರನ್ನು ಜತೆಗೂಡಿಸದಿದ್ದಲ್ಲಿ ನಾವು ಸಫಲರಾಗುವುದು ಸಾಧ್ಯವಿಲ್ಲ, ಅದಕ್ಕಾಗಿ ಅವರ ಒಲವು ಗಳಿಸುವುದು ಹೇಗೆ ಎಂಬ ಚಿಂತೆಯೊಂದೇ ಎಲ್ಲ ನಾಯಕರನ್ನು ಕಾಡುತ್ತಿತ್ತು.

ಈಗಾಗಲೇ ತಿಳಿದಿರುವಂತೆ ಡಾಕ್ಟರ್ ಹೆಡಗೇವಾರರು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಸರ್ವವಿಧ ಕಷ್ಟಗಳನ್ನು ಎದುರಿಸಲು, ಅದರ ಜತೆಜತೆಯಾಗಿ ನಮ್ಮ ರಾಷ್ಟ್ರದ ಪತನಕ್ಕೆ ಕಾರಣವಾದ ಎಲ್ಲ ಮೂಲಭೂತ ದೌರ್ಬಲ್ಯಗಳನ್ನು - ಎಂದರೆ ರಾಷ್ಟ್ರದ ಅಸಂಘಟಿತ ಸ್ಥಿತಿ ಮತ್ತು ನೈಜ ರಾಷ್ಟ್ರೀಯತೆಯ ಮರೆವು ಮೊದಲಾದವುಗಳನ್ನು - ದೂರಗೊಳಿಸಲು ನಿರ್ಧರಿಸಿ ಕಾರ್ಯಮಾಡಲು ಸೊಂಟಕಟ್ಟಿದರು.

## ನಮ್ಮ ನಿಜವಾದ ರಾಷ್ಟ್ರೀಯತೆಯ ಅರಿವು

ಈಗಂತೂ ಸ್ವಯಂಸೇವಕರ ಇಷ್ಟೊಂದು ದಿನಗಳ ಅವಿಶ್ರಾಂತ ಪರಿಶ್ರಮದ ಫಲವಾಗಿ ಶಾಖೆಗಳು ರಾಷ್ಟ್ರವ್ಯಾಪಿಯಾಗಿ ವಿಸ್ತರಿಸಿವೆ. ಸಂಘದ ಪ್ರಭಾವವೂ ಎಲ್ಲ ಕಡೆಗಳಲ್ಲಿ ಅನುಭವಕ್ಕೆ ಬರುತ್ತಿದೆ. ಇದರ ಪರಿಣಾಮವಾಗಿ ಡಾಕ್ಟರ್ ಹೆಡಗೇವಾರರ ಚಿಂತನೆ ನೂರಕ್ಕೆ ನೂರರಷ್ಟು ಸರಿ ಹೇಗೆ ಎಂಬುದನ್ನು ಕೇವಲ ಸಾಮಾನ್ಯ ಜನತೆಯಷ್ಟೆ ಅಲ್ಲ, ಸಮಾಜದಲ್ಲಿನ ಚೆನ್ನಾಗಿ ಓದು ಬರಹ ತಿಳಿದಿರುವ ಪ್ರಭಾವೀ ವ್ಯಕ್ತಿಗಳೂ ಸ್ವೀಕರಿಸಿದ್ದಾರೆ. ಅವರೂ ನಮ್ಮ ನೈಜ ರಾಷ್ಟ್ರೀಯತೆ ಎಂದರೆ 'ಹಿಂದುತ್ವ', ನಮ್ಮ ರಾಷ್ಟ್ರದ ಹೆಸರು 'ಹಿಂದು' ಇತ್ಯಾದಿ ಒಪ್ಪುವ ಹಂತಕ್ಕೆ ತಲಪಿದ್ದಾರೆ. ಇದರ ಜತೆಯಲ್ಲಿ ನಮ್ಮಿ ಹಿಂದು ಸಮಾಜವು ಒಂದುಗೂಡಿ ಏಕತೆಯ ಮೈವೆತ್ತ ರೂಪವಾಗಿ ಸುಸಂಘಟಿತ ವಿರಾಟ ಹಿಂದುರಾಷ್ಟ್ರವಾಗಿ ಎದ್ದು ನಿಲ್ಲದಿದ್ದಲ್ಲಿ ಮುಂದೆ ನಮ್ಮ ಅಸ್ತಿತ್ವವೇ ಅಪಾಯಕ್ಕೆ ಒಳಗಾಗಬಹುದು ಎಂಬ ಕಠೋರ ವಾಸ್ತವಿಕತೆಯನ್ನು ಈಗ ಜನರು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಿದ್ದಾರೆ.

## ಬೇಕು - ಸಂಪೂರ್ಣ ಹಿಂದು ಸಮಾಜದ ಸಂಘಟನೆ

ಹಿಂದು ರಾಷ್ಟ್ರೀಯತೆಯನ್ನು ಆಧರಿಸಿ ಹಿಂದು ಸಮಾಜದ ಸಂಘಟನೆ ಕಟ್ಟುವ ಉದ್ದೇಶವಿರಿಸಿ ಡಾಕ್ಟರ್ ಹೆಡಗೇವಾರರು ಸಂಘದ ಸ್ಥಾಪನೆಯನ್ನೇನೋ ಮಾಡಿದರು. ಆದರೆ ಅಷ್ಟರಿಂದಲೇ ಎಲ್ಲವೂ ಆಯಿತೆನ್ನುವಂತೆಯೂ ಇರಲಿಲ್ಲ. ಹಿಂದು ಸಮಾಜದ ಸಂಘಟನೆ ಎಂದರೆ ಏನದು? ಈ ಸಂಘಟನೆ ಹೇಗಿರಬೇಕು? ಅದಕ್ಕಾಗಿ ಸ್ವಯಂಸೇವಕರ ಮನೋರಚನೆ ಹೇಗಿರಬೇಕು? ಇವೆಲ್ಲ ಸಂಗತಿಗಳ ಕುರಿತು ಸ್ವಯಂಸೇವಕರಿಗೆ ವಿವರಿಸಲು ಸಹ ಅವರು ಆರಂಭಿಸಿದರು. ಸಾಮಾನ್ಯವಾಗಿ ಸಂಘಟನೆ ಎಂದರೆ ಸಮಾಜದ ಒಳಗೆ ಅದರ ಕೆಲವು ಸದಸ್ಯರನ್ನು

ಒಂದುಗೂಡಿಸುವ ಒಂದು ಸಂಸ್ಥೆ ಎಂದು ಎಲ್ಲರೂ ತಿಳಿಯುತ್ತಾರೆ. ಆದರೆ ಡಾಕ್ಟರ್ ಹೆಡಗೇವಾರರು ಸ್ಥಾಪಿಸಿದ ಸಂಘವು ಸಮಾಜದ ಒಳಗೆ ಒಂದು ಪ್ರತ್ಯೇಕ ಸಂಘಟನೆಯಲ್ಲ, ಬದಲಾಗಿ ಸಂಪೂರ್ಣ ಹಿಂದು ಸಮಾಜವನ್ನೇ ಸಂಘಟಿಸುವ ಒಂದು ಪ್ರಯತ್ನವಾಗಿದೆ. ಎಂದರೆ ಸಂಪೂರ್ಣ ಹಿಂದು ಸಮಾಜವನ್ನೇ ಸುಸಂಘಟಿತಗೊಳಿಸುವುದು ಇದರ ಲಕ್ಷ್ಯವಾಗಿದೆ.

## ಸಂಕಟವೊದಗಿದಾಗಲೂ ಹಿಂದು ಏಕತೆ ಗಟ್ಟಿ

ಡಾಕ್ಟರ್ ಹೆಡಗೇವಾರರ ಕಾಲದಿಂದ ಆರಂಭಿಸಿ ಇಂದಿನವರೆಗೂ ಸಂಘದ ದೃಷ್ಟಿಕೋನ ಇದೇ ಆಗಿದೆ. ಡಾಕ್ಟರ್ ಹೆಡಗೇವಾರರ ನಂತರ ಶ್ರೀಗುರೂಜಿಯವರ ಕಾಲಾವಧಿಯಲ್ಲಿನ ಒಂದು ಉದಾಹರಣೆ ಇಲ್ಲಿ ತಿಳಿಸುವುದು ಉಚಿತವಾದೀತು. ಗಾಂಧೀಜಿಯವರ ಹತ್ಯೆಯನ್ನು ದುರ್ಬಳಕೆ ಮಾಡಿಕೊಂಡು ಕಾಂಗ್ರೆಸ್, ಸಮಾಜವಾದಿ ಮತ್ತು ಕಮ್ಯುನಿಸ್ಟ್ ಈ ಪಕ್ಷಗಳ ಸದಸ್ಯರು ಸಂಘವನ್ನು ನಾಶಗೊಳಿಸಲು ಮುಂದಾದರು. ವಿಶೇಷವಾಗಿ ಮಹಾರಾಷ್ಟ್ರ ಮತ್ತು ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಸಂಘದ ಸ್ವಯಂಸೇವಕರ ಮೇಲೆ, ಅವರ ಮನೆಗಳ ಮೇಲೆ ಇವರೆಲ್ಲರೂ ಭೀಷಣ ರೀತಿಯ ಹಲ್ಲೆ ನಡೆಸಿದರು. ಆ ದಿನಗಳಲ್ಲಿ ಸಂಘದ ಶಕ್ತಿಯೂ ಕಡಿಮೆಯೇನಿರಲಿಲ್ಲ. ಹಲ್ಲೆ ನಡೆಸಿದವರೆಲ್ಲರಿಗೂ ತಕ್ಕ ಭಾಷೆಯಲ್ಲಿ ಉತ್ತರ ನೀಡಬಲ್ಲ ಸಾಮರ್ಥ್ಯ ಸಂಘದ ಬಳಿಯಿತ್ತು. ಅಷ್ಟಾದರೂ ಸಂಘದ ಸರಕಾರ್ಯವಾಹರಿಂದ ದೇಶದ ಎಲ್ಲ ಸ್ವಯಂಸೇವಕರಿಗೂ ಯಾವುದೇ ಪರಿಸ್ಥಿತಿಯಲ್ಲೂ ಶಾಂತರಾಗಿರಬೇಕೆಂಬ ಸೂಚನೆ ತಲುಪಿತು. ಅಷ್ಟೇ ಅಲ್ಲ, ನಾಗಪುರದಲ್ಲಿ ಶ್ರೀಗುರೂಜಿಯವರ ನಿವಾಸ (ಕಾರ್ಯಾಲಯ)ದ ಮೇಲೆ ಧಾಳಿ ನಡೆಸಲು ಆಕ್ರಮಣಕಾರರೆಲ್ಲ ಒಂದುಗೂಡಿ ಬಂದಿದ್ದಾಗಲೂ ಶ್ರೀಗುರೂಜಿಯವರು ಸ್ವಯಂಸೇವಕರಿಗೆ ಪ್ರತೀಕಾರವೆಸಗಲು ಅನುಮತಿ ನೀಡಲಿಲ್ಲ. "ಯಾವ ಸಮಾಜದ ಏಕತೆಗಾಗಿ, ಅದರ ಸೇವೆಗಾಗಿ ನಾವು ಸಮರ್ಪಿತರಾಗಿದ್ದೇವೋ, ಅಂತಹ ಸಮಾಜದ ಒಬ್ಬನೇ ಒಬ್ಬ ವ್ಯಕ್ತಿಯ ಒಂದು ಹನಿರಕ್ತವೂ ಬೀಳಲು ನಾನು ಅವಕಾಶ ನೀಡಲಾರೆ" ಎಂದು ಖಡಾಖಂಡಿತವಾಗಿ ಅವರು ತಿಳಿಸಿದರು.

## ಜನಪ್ರಿಯತೆಯ ಶಿಖರದಲ್ಲಿರುವಾಗಲೂ ಅದೇ ದೃಷ್ಟಿ

ಇದೇ ವಿಧದ ಇನ್ನೊಂದು ಪ್ರಸಂಗ. ೧೯೪೮ರ ಫೆಬ್ರವರಿಯ ಆರಂಭದಲ್ಲಿ ಸಂಘದ ಮೇಲೆ ವಿಧಿಸಲಾದ ಪ್ರತಿಬಂಧ ೧೯೪೯ರ ಜುಲೈನಲ್ಲಿ ದೂರವಾದ ಮೇಲೆ ಶ್ರೀಗುರೂಜಿ ಅವರು ದೇಶಾದ್ಯಂತ ಬಿರುಗಾಳಿಯ ಪ್ರವಾಸ ಮಾಡಿದರು. ಈ ಸಂದರ್ಭದಲ್ಲಿ ವಿವಿಧೆಡೆ ನಡೆದ ಸಾರ್ವಜನಿಕ ಸನ್ಮಾನ ಸಮಾರಂಭಗಳಲ್ಲಿ ಜನರು ಜಗ್ಗಿ ಸೇರುತ್ತಿದ್ದರು. ಅವರೆಲ್ಲರೂ ಸಂಘದ ಮೇಲೆ, ಶ್ರೀಗುರೂಜಿಯವರ ಮೇಲೆ ತಮ್ಮ ಪ್ರೀತಿ ಆದರಗಳ ಮಹಾಪೂರವನ್ನೇ ಹರಿಸುತ್ತಿದ್ದರು. ದಿಲ್ಲಿಯ ಸಮಾರಂಭದಲ್ಲಿ ಸೇರಿದ್ದ ವಿಶಾಲ ಜನಸಾಗರವನ್ನು ಕಂಡು ಲಂಡನ್‌ನ ಬಿಬಿಸಿ ತನ್ನ ವರದಿಯಲ್ಲಿ - "ಈಗ ಭಾರತದಲ್ಲಿ ತಮ್ಮ ಭಾಷಣ ಕೇಳಲು ಪ್ರಚಂಡ ಸಂಖ್ಯೆಯಲ್ಲಿ ಜನರನ್ನು ಆಕರ್ಷಿಸಬಲ್ಲ ನಾಯಕರೆಂದರೆ ಇಬ್ಬರು ಮಾತ್ರ - ಒಬ್ಬರು ಪಂಡಿತ ನೆಹರು ಮತ್ತು ಇನ್ನೊಬ್ಬರು ಸಂಘದ ಶ್ರೀ ಗೋಳ್ವಲಕರ್ ಅವರು - ಎಂದು ಚಿತ್ರಿಸಿತ್ತು. ಇಂತಹ ಅಭೂತಪೂರ್ವ ಜನಾದರ ಮತ್ತು ಜನಸಮರ್ಥನೆ ದೊರೆತಿದ್ದಾಗಲೂ ಶ್ರೀಗುರೂಜಿಯವರು ತನ್ನ ದೇಶಬಾಂಧವರ ನಡುವೆ ಏಕತೆ ಮತ್ತು ಸಮರಸತೆಯನ್ನು ಕಾಪಾಡುವ ಸಂದೇಶವನ್ನೇ ನೀಡಿದರು. ಕೆಲವೇ ದಿನಗಳ ಹಿಂದೆ ಸ್ವತಃ ತನ್ನ ಮೇಲೆ ಮತ್ತು ಸಂಘದ ಸಾವಿರಾರು ಸ್ವಯಂಸೇವಕರ ಮೇಲೆ ನಡೆಸಲಾದ ಅನ್ಯಾಯ ಮತ್ತು ಅಪಮಾನಗಳ ಕಹಿಯನ್ನು ಅವರು ಲೇಶಮಾತ್ರವೂ ಮನದೊಳಗೆ ಸುಳಿಯಲು ಬಿಡಲಿಲ್ಲ. "ಊಟ ಮಾಡುವಾಗ ಎಂದೋ ಒಮ್ಮೆ ಆಕಸ್ಮಾತ್ ಹಲ್ಲು ನಾಲಗೆಯನ್ನು ಕಚ್ಚಿದಲ್ಲಿ ನಾವು ಹಲ್ಲನ್ನು

ಕಿತ್ತೆಸೆಯುತ್ತೇವೇನು? ಹಲ್ಲೂ ನಮ್ಮದೇ. ನಾಲಗೆಯೂ ನಮ್ಮದೇ. ಆದೇ ರೀತಿ ಇಂದು ದೇಶದ ನಾಯಕರಾಗಿರುವವರು ಸಹ ನಮ್ಮವರೇ. ಅವರ ಬಗ್ಗೆ ನಮ್ಮ ದೃಷ್ಟಿ ಉದಾರವಾಗಿರಬೇಕಾದುದು ಅತ್ಯಗತ್ಯ" ಎಂದು ಅವರು ಸ್ವಯಂಸೇವಕರಿಗೆ ವಿವರಿಸುತ್ತಿದ್ದರು.

## ಸ್ವರಕ್ಷಣೆ ದುರಾಸೆಗೆ ಬಲಿಯಾಗಲಿಲ್ಲ

ಒಂದು ಸಂಗತಿಯಂತೂ ನಿಮಗೆ ಗೊತ್ತಾಗಿರಬಹುದು - ಇವೆಲ್ಲ ಪ್ರಸಂಗಗಳಲ್ಲಿ ಸಂಘಕ್ಕೆ ಭಾರೀ ಹಾನಿಯಾಗಿತ್ತು. ಅಷ್ಟಾದರೂ ತನಗಾದ ಅನ್ಯಾಯಗಳ ವಿರುದ್ಧ ಸಂಘವು ಎಂದೂ ಸೇಡು ತೀರಿಸಲು ಮುಂದಾಗಲಿಲ್ಲ. ಸಂಘವೇನಾದರೂ ಅಪೇಕ್ಷೆ ಪಟ್ಟಲ್ಲಿ ತನ್ನೆಲ್ಲ ವಿರೋಧಿಗಳಿಗೆ ಅವರಿಗೆ ಅದೇ ಭಾಷೆಯಲ್ಲೇ ಉತ್ತರಕೊಡಲು ಸಮರ್ಥವಿತ್ತು ಎಂಬುದೂ ಈಗ ಸರ್ವವಿದಿತ. ಸಂಘದ ಬಳಿ ಅಷ್ಟು ಸಾಮರ್ಥ್ಯವಿತ್ತು. ಆದರೂ ಸೇಡು ತೀರಿಸಲು ಮುಂದಾಗಲಿಲ್ಲವೇಕೆ ? ಕಾರಣವಿಷ್ಟೇ, ತನಗೆ ಏನೇ ಆಗಲಿ, ಆದರೆ ಸಮಾಜದ ಏಕತೆ ಮತ್ತು ಸಮರಸತೆ ಕೆಡಲು ಯಾವುದೇ ಪರಿಸ್ಥಿತಿಯಲ್ಲಿ ತಾನು ಬಿಡಲಾರೆ ಎಂಬ ಶಪಥವನ್ನು ಸಂಘವು ಸ್ವೀಕರಿಸಿತ್ತು.

## ಸಂಘವು ಇಂದಿರಾಜಿಯವರ ಸಲಹೆಯನ್ನು ತಿರಸ್ಕರಿಸಿದುದೇಕೆ?

1975-77ರ ತುರ್ತುಪರಿಸ್ಥಿತಿಯಲ್ಲಿ ಕೊನೆಯ ದಿನಗಳ ಒಂದು ಉದ್ಬೋಧಕ ಪ್ರಸಂಗ. ಸಂಘದ ಸ್ವಯಂಸೇವಕರು ನಡೆಸುತ್ತಿದ್ದ ವ್ಯಾಪಕವಾದ ಹಾಗೂ ಅತ್ಯಂತ ಪ್ರಭಾವಿಯಾದ ಭೂಗತ ಚಳವಳಿಯಿಂದಾಗಿ ತನ್ನ ಸರ್ವಾಧಿಕಾರದ ಸಿಂಹಾಸನ ಅಲುಗಾಡುತ್ತಿರುವುದಾಗಿ ಇಂದಿರಾ ಗಾಂಧಿಯವರಿಗೆ ಅನಿಸಿದಾಗ ಆಕೆ ತನ್ನ ಗುಪ್ತಚರ ವಿಭಾಗದ ಓರ್ವ ಪ್ರಮುಖನ ಮೂಲಕ ಸಂಘದ ಪ್ರಮುಖರಿಗೆ ಒಂದು ಸಂದೇಶ ಕಳುಹಿಸಿದರು. ತನ್ನ ವಿರುದ್ಧ ನಡೆಯುತ್ತಿರುವ ಆಂದೋಲನದಿಂದ ಸಂಘವೇನಾದರೂ ಹಿಂದೆ ಸರಿದಲ್ಲಿ, ತನ್ನ ಸರಕಾರವೂ ಸಂಘದ ಮೇಲಿನ ನಿಷೇಧವನ್ನು ಹಿಂತೆಗೆಯುವ ಕುರಿತು ಪರಿಶೀಲಿಸುವುದಾಗಿ ಆ ಸಂದೇಶವಿತ್ತು. ಆದರೆ ಯಾವುದೇ ಪರಿಸ್ಥಿತಿಯಲ್ಲೂ ಸ್ವಲಾಭಕ್ಕಾಗಿ ದೇಶಕ್ಕೆ ದ್ರೋಹವೆಸಗಲು ತಾವು ಸಿದ್ಧರಿಲ್ಲ ಎಂದು ಸಂಘದ ಪ್ರಮುಖರು ಅವರಿಗೆ ಖಂಡತುಂಡ ಉತ್ತರವನ್ನಿತ್ತರು.

## ರಾಜಕಾರಣದಿಂದ ದೂರವೇಕೆ?

ನಮ್ಮ ಸಮಾಜದ ಏಕತೆಯನ್ನು ಭಂಗಗೊಳಿಸುವಂತಹ ಜಾತಿಭೇದ, ಸ್ಪೃಶ್ಯ- ಅಸ್ಪೃಶ್ಯ ಇತ್ಯಾದಿ ಎಲ್ಲ ವಿಧ ದೋಷಗಳನ್ನು ದೂರಗೊಳಿಸಲು ಸ್ವಯಂಸೇವಕರು ಯಾವ ರೀತಿ ಸತತವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಎಂಬುದನ್ನು ನಾವು ನೋಡಿದೆವು. ಆದರೆ ನಮ್ಮ ಸಮಾಜವನ್ನು ಒಡೆಯುವ ಇನ್ನೊಂದು ಪ್ರವೃತ್ತಿ - ವಿಶೇಷವಾಗಿ ಸ್ವರಾಜ್ಯ ಪ್ರಾಪ್ತಿಯ ನಂತರ - ಈಗ ಬಲಗೊಳ್ಳುತ್ತಿದೆ. ಅದು ರಾಜಕೀಯ ಭಿನ್ನಾಭಿಪ್ರಾಯಗಳು, ಅಧಿಕಾರದ ಪೈಪೋಟಿ ಮತ್ತು ಸ್ವಾರ್ಥ. ರಾಜಕೀಯ ನಾಯಕರು ಸಮಾಜದಲ್ಲಿ ಜಾತಿ, ಪಂಥ, ವರ್ಗ ಇತ್ಯಾದಿ ಹಲವು ವಿಧದ ಸಾಮಾಜಿಕ ವೈವಿಧ್ಯಗಳಿಗೆ ಭೇದದ ರೂಪಕೊಟ್ಟು ಒಡಕು ಸೃಷ್ಟಿಸುತ್ತಿದ್ದಾರೆ. ಮತ್ತು ಈ ಒಡಕಿನ ಬೆಂಕಿಯಲ್ಲಿ ತಮ್ಮ ರಾಜಕೀಯ ಬೇಳೆಯನ್ನು ಬೇಯಿಸುತ್ತಿದ್ದಾರೆ. ಡಾಕ್ಟರ್ ಹೆಡಗೇವಾರರು ಸ್ವತಃ ರಾಜಕಾರಣಿಯಾಗಿದ್ದುದರಿಂದ ಸಮಾಜಕ್ಕೆ ಅದರಿಂದಾಗುವ ಹಾನಿಯ ಕುರಿತು ಚೆನ್ನಾಗಿ ತಿಳಿದಿದ್ದರು. ಹೀಗಾಗಿ ಅವರು ಸ್ವತಃ ವಿದರ್ಭದ ಓರ್ವ ಪ್ರತಿಷ್ಠಿತ ರಾಜಕಾರಣಿಯಾಗಿದ್ದರೂ, ಸಂಘದ ಸ್ಥಾಪನೆಯ ನಂತರ ಸರ್ವವಿಧ ರಾಜಕೀಯ ಚಟುವಟಿಕೆಗಳಿಂದ ತಾವು ದೂರವಾದರು ಮತ್ತು ಸಂಘವನ್ನೂ ದೂರವಾಗಿಯೇ ಇರಿಸಿದರು. ಸಂಘವು ಮುಂದೆಯೂ ಇದೇ ನೀತಿಯನ್ನು ವಿಶೇಷ ಎಚ್ಚರವಹಿಸಿ ಅನುಸರಿಸುತ್ತ ಬಂದಿದೆ.

## ಪ್ರತಿಯೊಂದು ಪ್ರಸಂಗದಲ್ಲೂ ಅಧಿಕಾರ ಮತ್ತು ರಾಜಕೀಯದಿಂದ ಅಲಿಪ್ತ

ಭಾರತವು ಸ್ವತಂತ್ರಗೊಂಡ ಮೇಲೆ ರಾಜಕೀಯ ಮತ್ತು ಚುನಾವಣೆಗಳೇ ರಾಷ್ಟ್ರಜೀವನದ ಕೇಂದ್ರ, ಬಿಂದುಗಳೇನೋ ಎಂಬಂತಾದವು. ಹೀಗಾಗಿ ಕೆಲವು ಹಿಂದುತ್ವವಾದಿಗಳಿಗೂ ಸಂಘದಂತಹ ಒಂದು ಪ್ರಭಾವೀ ಸಂಘಟನೆಯೂ ರಾಜಕೀಯವನ್ನು ಪ್ರವೇಶಿಸಿದಲ್ಲಿ ಹಿಂದು ಸಮಾಜಕ್ಕೆ ತುಂಬ ಲಾಭವಾದೀತು ಎಂಬ ಅಪೇಕ್ಷೆ ಅಂಕುರಿಸಿತು. ಆದರೆ ಸಂಘವು ತನ್ನ ಪೂರ್ವನಿರ್ಧಾರಿತ ನೀತಿಗನುಸುಗುಣವಾಗಿ ದೃಢವಾಗಿ ನಿಲ್ಲಲು ನಿರ್ಧರಿಸಿ ರಾಜಕೀಯದಿಂದ ಅಲಿಪ್ತವಾಗಿಯೇ ಉಳಿಯಿತು. 1948-49ರಲ್ಲಿ ಸಂಘದ ಮೇಲೆ ನಿಷೇಧವಿದ್ದಾಗ ಕೇಂದ್ರದ ಗೃಹಮಂತ್ರಿ ಸರದಾರ ಪಟೇಲರು ಶ್ರೀ ಗುರೂಜಿಯವರಿಗೆ ಬರೆದ ಪತ್ರದಲ್ಲಿ ಸಂಘವು ಕಾಂಗ್ರೆಸ್‌ನಲ್ಲಿ ವಿಲೀನಗೊಂಡು ದೇಶದ ಸೇವೆಯಲ್ಲಿ ತೊಡಗಬೇಕು ಎಂದು ಆಗ್ರಹಿಸಿದ್ದರು. ಆ ದಿನಗಳಲ್ಲಿ ಸಂಘದ ಮೇಲಿನ ನಿಷೇಧ ದೂರವಾಗುವಂತಹ ಯಾವ ಲಕ್ಷಣಗಳೂ ಇರಲಿಲ್ಲ. ಆದರೆ ಅಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲೂ ಶ್ರೀ ಗುರೂಜಿಯವರು ಸರದಾರ ಪಟೇಲರ ಸಲಹೆಯನ್ನು ವಿನಮ್ರತೆಯಿಂದ ತಿರಸ್ಕರಿಸಿ ಸಂಘವು ತನ್ನ ಮೊದಲಿನ ರೀತಿಯಂತೆ ಸಾಂಸ್ಕೃತಿಕ ಕ್ಷೇತ್ರದಲ್ಲೇ ಕೆಲಸ ಮಾಡಲಿಚ್ಛಿಸುವುದಾಗಿ ಪತ್ರ ಬರೆದಿದ್ದರು.

1975-77ರ ತುರ್ತುಪರಿಸ್ಥಿತಿ ಕಳೆದ ನಂತರ ಸಂಘದ ಮುಂದೆ ಇನ್ನೊಂದು ವಿಧದ ರಾಜಕೀಯ ಸಂದಿಗ್ಧ ಎದುರಾಯಿತು. ಆಗಿನ ಎಲ್ಲ ವಿರೋಧಿ ಪಕ್ಷಗಳ ನಾಯಕರುಗಳಿಗೆ ತುರ್ತುಪರಿಸ್ಥಿತಿಯ ವಿರುದ್ಧ ಜನಜಾಗೃತಿ ಮತ್ತು ಸಂಘಟನೆಯ ಕೆಲಸದಲ್ಲಿ ಸಂಘದ ಸ್ವಯಂಸೇವಕರ ಪಾತ್ರವೇ ಪ್ರಮುಖವಾಗಿದ್ದುದು ತಿಳಿದಿತ್ತು. ಅಷ್ಟೇ ಅಲ್ಲ, ವಿಭಿನ್ನ ಹಾಗೂ ಪರಸ್ಪರ ವಿರೋಧಿ ಅಭಿಪ್ರಾಯಗಳುಳ್ಳ ಪಕ್ಷಗಳನ್ನು ಒಂದೇ ವೇದಿಕೆಗೆ ಕರೆತಂದು ಜನತಾಪಕ್ಷ ಎಂಬ ಒಂದು ರಾಜಕೀಯ ಪಕ್ಷವನ್ನು ರಚಿಸುವುದರಲ್ಲಿ, ಸೆರೆಮನೆಗಳಲ್ಲಿದ್ದ ಮತ್ತು ಹೊರಗೆ ಭೂಗತವಾಗಿ ಆಂದೋಲನದಲ್ಲಿ ತೊಡಗಿದ್ದ ಸಂಘದ ಪ್ರಮುಖ ಕಾರ್ಯಕರ್ತರದ್ದೇ ನಿರ್ಣಾಯಕ ಪಾತ್ರವಿದ್ದುದೂ ಅವರೆಲ್ಲರಿಗೆ ಗೊತ್ತಿತ್ತು. ಚುನಾವಣೆಗಳು ಘೋಷಿತವಾದಾಗ ಭಯಗ್ರಸ್ತ ಜನರಲ್ಲಿ ಧೈರ್ಯ ತುಂಬಿ ಇಂದಿರಾ ಗಾಂಧಿಯವರ ವಿರುದ್ಧ ಮತ ಚಲಾಯಿಸಲು ಪ್ರೇರಣೆ ನೀಡಿದವರೂ ಸ್ವಯಂಸೇವಕರೇ ಆಗಿದ್ದರು. ಇವೆಲ್ಲದರ ಪರಿಣಾಮವಾಗಿಯೇ ಜನತಾಪಕ್ಷಕ್ಕೆ ಭಾರೀ ಗೆಲವು ದೊರೆತು, ತುರ್ತು ಪರಿಸ್ಥಿತಿಯ ದುಃಶಾಸನ ಪರ್ವ ಕೊನೆಗೊಂಡಿತು ಹಾಗೂ ಭಾರತದಲ್ಲಿ ಪ್ರಜಾಪ್ರಭುತ್ವವು ಇನ್ನೊಮ್ಮೆ ನೆಲೆಸಲು ಸಾಧ್ಯವಾಯಿತು.

ಈ ಹಿನ್ನೆಲೆಯಲ್ಲಿ ಕೇಂದ್ರೀಯ ಹಾಗೂ ವಿವಿಧ ರಾಜ್ಯಗಳ ಮಂತ್ರಿಮಂಡಲಗಳಲ್ಲೂ ಸಂಘದ ಕೆಲವು ಪ್ರತಿನಿಧಿಗಳು ಸೇರಿಕೊಳ್ಳಬಹುದು ಎಂಬ ನಿರೀಕ್ಷೆ ಕೆಲವರಲ್ಲಿತ್ತು. ಆದರೆ ತುರ್ತುಪರಿಸ್ಥಿತಿ ಕಳೆದು ಸಂಘದ ಮೇಲೆ ಪ್ರತಿಬಂಧ ದೂರವಾದಂತೆಯೇ ಮರುದಿನದಿಂದಲೇ ಸ್ವಯಂಸೇವಕರು ತಮ್ಮ ನಿತ್ಯದ ಶಾಖಾಕಾರ್ಯದಲ್ಲಿ ಮೊದಲಿನಂತೆ ತಮ್ಮನ್ನು ತೊಡಗಿಸಿಕೊಂಡರು ಹಾಗೂ ಅಧಿಕಾರ, ರಾಜಕೀಯ ಇತ್ಯಾದಿ ಕುರಿತು ಯೋಚಿಸುವುದನ್ನು ಸಹ ಬಿಟ್ಟರು. ಇಂದಿರಾ ಗಾಂಧಿಯವರು ರಾಷ್ಟ್ರ ಹಾಗೂ ಸಂಘದ ಮೇಲೆ ನಡೆಸಿದ್ದ ಘೋರ ಅನ್ಯಾಯ ಮತ್ತು ಸ್ವಯಂಸೇವಕರ ಮೇಲೆ ಎಸಗಿದ್ದ ಅಗಣಿತ ಬರ್ಬರ ಅತ್ಯಾಚಾರಗಳ ಬಗ್ಗೆಯೂ ಶ್ರೀ ಬಾಳಾಸಾಹೇಬ್ ದೇವರಸ್ ಅವರು 'ಕ್ಷಮಿಸಿ ಮರೆತು ಬಿಡುವಂತೆ' ಸ್ವಯಂಸೇವಕರಿಗೆ ತಿಳಿಸಿದರು.

## ಇಷ್ಟೊಂದು ಕಾರ್ಯಕರ್ತರು ತಯಾರಾಗುವುದು ಹೇಗೆ?

ಈಗ ದೇಶಾದ್ಯಂತ ಇಷ್ಟೊಂದು ಸಾವಿರಾರು ಶಾಖೆಗಳು, ಇಷ್ಟೊಂದು ವಿಧದ ಭಾರೀ ಭಾರೀ ಸಂಘಟನೆಗಳು, ವ್ಯಾಪಕವಾದ ಅಭಿಯಾನಗಳು ಮತ್ತು ಜನಾಂದೋಲನಗಳು ಇತ್ಯಾದಿ

ನಡೆಸಲು ಸಂಘದ ಬಳಿ ಎಷ್ಟು ಲಕ್ಷ ಕಾರ್ಯಕರ್ತರಿರಬಹುದು ಎಂದು ನೀವು ಯೋಚಿಸುತ್ತಿರಬಹುದು. ಇನ್ನೊಂದು ಸಂಗತಿಯೂ ಇದೆ. ಸಂಘವು ಆರಂಭವಾಗಿ ಈಗ 75 ವರ್ಷಗಳು ಕಳೆದಿವೆ. ಹೀಗಾಗಿ ಕಾರ್ಯಕರ್ತರದೂ ಹೊಸ ಹೊಸ ಪೀಳಿಗೆ ತಯಾರಾಗುತ್ತಿರಬಹುದು - ಶಾಖೆಗಳಲ್ಲಿ. ಇಷ್ಟು ಭಾರೀ ಪ್ರಮಾಣದಲ್ಲಿ ಹೊಸ ಹೊಸ ಪೀಳಿಗೆಯ ಕಾರ್ಯಕರ್ತರು ಹೇಗೆ ತಯಾರಾಗುತ್ತಾರೆ? ಇಂದು ನಮ್ಮ ದೇಶದಲ್ಲಿನ ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಸಂಸ್ಥೆಗಳಿಗೆ ಹೊಸ ಹೊಸ ಪ್ರಾಮಾಣಿಕ, ಸೇವಾಭಾವನೆಯುಳ್ಳ ತರುಣರು ಲಭಿಸುತ್ತಿಲ್ಲ. ಹೀಗಾಗಿ ಅವುಗಳನ್ನು ನಡೆಸಲು ಕಷ್ಟವಾಗುತ್ತಿದೆ ಇತ್ಯಾದಿ ಸಂಗತಿಗಳನ್ನು ಕೇಳುವಂತಹ ದೌರ್ಭಾಗ್ಯಕರ ಪರಿಸ್ಥಿತಿ ಎಲ್ಲ ಕಡೆಗಳಲ್ಲಿದೆ. ಆದರೆ ಸಂಘದಿಂದ ಮಾತ್ರ ಇತರ ಸಹಕಾರಿ ಸಂಘಟನೆಗಳಿಗೆ ಅಲ್ಲಿ ಕಾರ್ಯ ಮಾಡುವ ಸಲುವಾಗಿಯೂ ಕಾರ್ಯಕರ್ತರನ್ನು ಕಳುಹಿಸಲಾಗುತ್ತದೆ. ಇದು ಹೇಗೆ ಸಾಧ್ಯ?

ಡಾಕ್ಟರ್ ಹೆಡಗೇವಾರರು ಈ ಕುರಿತು ಆರಂಭದಿಂದಲೇ ಆಳವಾಗಿ ಯೋಚಿಸಿದ್ದರು. ಅದಕ್ಕಾಗಿ ಶಾಖೆಯ ಕಾರ್ಯಪದ್ಧತಿಯಲ್ಲಿ ಸಣ್ಣಸಣ್ಣದಾಗಿ ಕಾಣಿಸುವಂತಹ, ಆದರೆ ಅತಿ ಮಹತ್ವದ್ದಾದ ಹಲವಾರು ಸಂಗತಿಗಳನ್ನು ಅವರು ಸೇರಿಸಿದ್ದರು. ಉದಾಹರಣೆಗೆ ಸಂಘವು ಸಮಾಜದಿಂದ ಪ್ರತ್ಯೇಕವಾಗಿರುವಂತೆ ಕಾಣದಂತೆ, ತನ್ನದೇ ಆದ ಯಾವುದೇ ಪ್ರತೀಕ ಅಥವಾ ಚಿಹ್ನೆಯನ್ನು ಇರಿಸಿಕೊಳ್ಳಬಾರದು ಎಂಬ ಎಚ್ಚರವನ್ನು ಅವರು ವಹಿಸಿದ್ದರು. ಸಂಘದ ಶಾಖೆ ಭಗವಾಧ್ವಜದ ಸಮ್ಮುಖದಲ್ಲಿ ನಡೆಯುತ್ತಿದೆ. ಅದು ಸಂಪೂರ್ಣ ಹಿಂದು ಸಮಾಜಕ್ಕೆ ಸಮಾನವಾದ ಶ್ರದ್ಧೆಯ ಒಂದು ಪ್ರತೀಕವಾಗಿದೆ. ಸ್ವಯಂಸೇವಕರು ಸಹ ಸಮಾಜದ ನಡುವೆ ಓಡಾಡುವಾಗ ತಮ್ಮ ಮೇಲೆ ಯಾವುದೇ ವಿಶಿಷ್ಟ ರೀತಿಯ ಚಿಹ್ನೆ ಧರಿಸುವುದಿಲ್ಲ. ತಮ್ಮೆಲ್ಲ ವ್ಯವಹಾರಗಳಲ್ಲೂ ಅವರು ಮಿಕ್ಕವರೆಲ್ಲರಂತೆ, ವೇಷಭೂಷಣ, ಮಾತು, ರೀತಿ ಇತ್ಯಾದಿಗಳಲ್ಲಿ ಇರುತ್ತಾರೆ. ಇವೆಲ್ಲ ಎಚ್ಚರಗಳನ್ನು ವಹಿಸಿದುದರಿಂದಾಗಿ ಸಂಘವು ಒಂದು ಪ್ರತ್ಯೇಕ ಪಂಥವಾಗದೆ, ಸಮಾಜದಲ್ಲಿ ಯಾವುದೋ ಒಂದು ವಿಶೇಷ ಗುಂಪು ಎನ್ನಿಸದಂತೆ ಇರಲು ಸಾಧ್ಯವಾಯಿತು.

## ಸಮಾಜದಲ್ಲಿನ 'ಸ್ವಕೇಂದ್ರಿತ' ಪ್ರಯತ್ನಗಳನ್ನು ಸಮಾಜಕೇಂದ್ರಿತ ಗೊಳಿಸಿದುದು ಹೇಗೆ?

ಸಾಮಾಜಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುವುದರಲ್ಲಿ ಆ ದಿನಗಳಲ್ಲಿ ರೂಢಿಯಲ್ಲಿದ್ದ ಅನೇಕ ತಪ್ಪು ಕಲ್ಪನೆಗಳಲ್ಲಿ ಉಚಿತ ಬದಲಾವಣೆಗಳನ್ನು ತರುವಂತಹ ಯಶಸ್ವೀ ಪ್ರಯತ್ನಗಳನ್ನು ಡಾಕ್ಟರ್ ಹೆಡಗೇವಾರರು ಮಾಡಿದರು. ಉದಾಹರಣೆಗೆ, ಸರ್ವ ಸಾಮಾನ್ಯ ಹಿಂದು ತನ್ನ ಸ್ವಂತದ ಕುಟುಂಬದ ಬಗ್ಗೆ ಯೋಚಿಸುವುದರಲ್ಲಿ ತನ್ನ ಕರ್ತವ್ಯಪೂರ್ತಿಯಾಯಿತೆಂದು ಆಗ ತಿಳಿಯುತ್ತಿದ್ದ. ಕೆಲವರು ಸಾಮಾಜಿಕ ಕೆಲಸಗಳಿಗೆ ಒಂದಿಷ್ಟು ಆರ್ಥಿಕ ಸಹಾಯ ಮಾಡುತ್ತಿದ್ದರು. ಕೆಲವರು ಬಿಡುವು ದೊರೆತಲ್ಲಿ ಕೆಲವು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಸಹಭಾಗಿಗಳೂ ಆಗುತ್ತಿದ್ದರು. ಹೆಚ್ಚಿನವರು ತಾವು ತಟಸ್ಥರಾಗಿರುತ್ತಿದ್ದರು ಅಥವಾ ತಮ್ಮ ಸಹಾನುಭೂತಿಯನ್ನು ಪ್ರದರ್ಶಿಸುವುದರಲ್ಲಿ ಸಂತೃಪ್ತಿ ಕಾಣುತ್ತಿದ್ದರು. ಇಂತಹ ಮನೋಧರ್ಮವನ್ನು ಯೋಗ್ಯ ರೀತಿಯಲ್ಲಿ ಬದಲಿಸಿ, ಸಾಮಾನ್ಯರು ಸಹ ಸಾಮಾಜಿಕ ಕಾರ್ಯಗಳಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಳ್ಳಲು ಸಾಧ್ಯವಾಗುವಂತೆ ಶಾಖಾ ಕಾರ್ಯಕ್ರಮಗಳನ್ನು ಡಾಕ್ಟರ್ ಹೆಡಗೇವಾರರು ರೂಪಿಸಿದರು. ಆ ದಿನಗಳಲ್ಲಿ ಕೇವಲ ಬಾಲಕರು ಮತ್ತು ತರುಣ ವಿದ್ಯಾರ್ಥಿಗಳೇ ಶಾಖೆಗೆ ಬರುತ್ತಿದ್ದವರು. ಹೀಗಾಗಿ ಶಾಖೆಗಳು ಸಾಯಂಕಾಲವೇ ನಡೆಯುತ್ತಿದ್ದವು. ಈಗ ವಿವಿಧ ವಯಸ್ಸಿನ ಬಾಲಕರು ತರುಣರು ಮತ್ತು ಪ್ರೌಢರು ಮತ್ತು ವಿವಿಧ ರೀತಿಯ ವೃತ್ತಿ ನಡೆಸುವವರೂ ಶಾಖೆಗಳಿಗೆ ಬರುತ್ತಿದ್ದಾರೆ. ಹೀಗಾಗಿ ಎಲ್ಲರ ಅನುಕೂಲತೆಗಾಗಿ ಶಾಖೆಯ ಸಮಯ ಮತ್ತು

ಕಾರ್ಯಕ್ರಮಗಳಲ್ಲೂ ಈಗ ಸೂಕ್ತ ವೈವಿಧ್ಯಗಳನ್ನು ತರಲಾಗಿದೆ.

## ಪ್ರಚಾರಕ ಮತ್ತು ಸ್ಥಾನೀಯ ಕಾರ್ಯಕರ್ತ

ಶಾಖೆಯಲ್ಲಿ ಮತ್ತು ನಂತರವೂ ಸ್ವಯಂಸೇವಕರ ನಡುವೆ ಅತ್ಯಂತ ಸ್ನೇಹದ ಕೌಟುಂಬಿಕ ವಾತಾವರಣವಿರುತ್ತದೆ. ಸ್ವಯಂಸೇವಕರ ಪರಿವಾರದ ಎಲ್ಲ ಹಿರಿಯ ಕಿರಿಯರ ಜತೆ, ಸ್ತ್ರೀಪುರುಷರ ಜತೆ ಶಾಖೆಯ ಕಾರ್ಯಕರ್ತರು ತುಂಬ ಆತ್ಮೀಯತೆಯ ನಡೆವಳಿಕೆ ಇರಿಸಿಕೊಳ್ಳುತ್ತಾರೆ. ಇದೆಲ್ಲದರ ಕಾರಣದಿಂದಾಗಿ ಶಾಖೆಗೆ ಬರುವ ಹೊಸಬರಿಗೂ ಅಲ್ಲಿನ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದರಲ್ಲಿ ಆನಂದದ ಅನುಭವವಾಗುತ್ತದೆ. ಸಾಮಾನ್ಯರ ಅನಿಸಿಕೆಯಂತೆ ಸಾಮಾಜಿಕ ಕಾರ್ಯವೆಂದರೆ ಏನೋ ಒಂದು ಹೊರೆ ಇದ್ದಂತೆ ಎಂದು ಸ್ವಯಂಸೇವಕರಿಗೆ ಅನಿಸುವುದಿಲ್ಲ. ಕ್ರಮೇಣ ಧ್ಯೇಯನಿಷ್ಠ ಕಾರ್ಯಕರ್ತರ ಮೇಲ್ಪಂಕ್ತಿ ನೋಡಿಕೊಂಡು ಹೊಸ ಸ್ವಯಂಸೇವಕನು ತಾನೂ ಶಾಖಾ ಕಾರ್ಯಕ್ಕಾಗಿ ಹೆಚ್ಚಿನ ಸಮಯ ನೀಡಲಾರಂಭಿಸುತ್ತಾನೆ. ಜತೆಯಲ್ಲಿ ಅವನ ಶಕ್ತಿ ಸಾಮರ್ಥ್ಯಗಳನ್ನು ಲಕ್ಷ್ಯದಲ್ಲಿರಿಸಿ ಆತನಿಗೆ ಸಣ್ಣಸಣ್ಣ ಜವಾಬ್ದಾರಿಗಳನ್ನು ನೀಡಲಾಗುತ್ತದೆ. ಹೊಸ ಪೀಳಿಗೆಯವರಿಗೆ ತರಬೇತಿ ನೀಡುವ ಕೆಲಸವನ್ನು ಹಳಬರ ಪೀಳಿಗೆ ಮಾಡುತ್ತಲೇ ಇರುತ್ತದೆ.

ಕಾರ್ಯಕರ್ತರನ್ನು ರೂಪಿಸುವ ಈ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿರುತ್ತದೆ. ಅಂತಹವರಲ್ಲೆ ಕೆಲವು ಕರ್ತೃತ್ವಶಾಲಿ ಸ್ವಯಂಸೇವಕರು ತಮ್ಮ ಶಿಕ್ಷಣ ಪೂರೈಸಿದ ನಂತರ ಸಂಘದ ಕೆಲಸಕ್ಕೆ ತಮ್ಮ ಪೂರ್ಣ ಸಮಯವನ್ನು ಕೊಡಲು ಸಹ ಸಿದ್ಧರಾಗುತ್ತಾರೆ. ಕಾರ್ಯಕ್ಕೆ ಸಂಬಂಧಿಸಿದಂತೆ ಎಲ್ಲಿ ಯಾವ ವಿಧದ ಅಗತ್ಯವಿದೆಯೋ ಅದಕ್ಕನುಗುಣವಾಗಿ ಅವರನ್ನು ಕಳುಹಿಸಲಾಗುತ್ತದೆ. ಅಂತಹ ಕಾರ್ಯಕರ್ತರನ್ನು 'ಪ್ರಚಾರಕ' ಎನ್ನಲಾಗುತ್ತದೆ.

ಪ್ರಚಾರಕರು ತಮ್ಮ ಮಾನಸಿಕ ಸಿದ್ಧತೆ ಮತ್ತು ಸಾಮರ್ಥ್ಯಕ್ಕನುಗುಣವಾಗಿ ಹಲವು ವಿಧ ಕಾಲಾವಧಿ ಸಂಘದ ಕಾರ್ಯ ಮಾಡುತ್ತಾರೆ. ಅವರಿಗೆಲ್ಲ ಒಂದು ವಿಶೇಷ ರೀತಿಯ ಪ್ರಶಿಕ್ಷಣವನ್ನು ಕೊಡಲಾಗುತ್ತದೆ. ಇಂತಹ ಕಾರ್ಯಕರ್ತರ ಸಂಖ್ಯೆ ಸೀಮಿತವಾಗಿರುವುದು ಸ್ವಾಭಾವಿಕವೇ. ಸಂಘದ ಹೆಚ್ಚಿನ ಕಾರ್ಯಕರ್ತರು ಗೃಹಸ್ಥರಾಗಿರುವವರು, ವಿದ್ಯಾರ್ಥಿಗಳು, ನೌಕರರು, ರೈತರು, ಮಜೂರರು, ಅಧ್ಯಾಪಕರು ಇತ್ಯಾದಿ. ಅವರಲ್ಲಿ ಎಲ್ಲ ವಯೋಮಾನದವರು ಮತ್ತು ಸುಮಾರು 9-10 ವರ್ಷದ ಬಾಲಕರಿಂದ ಹಿಡಿದು ವೃದ್ಧರಾಗಿದ್ದರೂ ತಮ್ಮ ಶರೀರ ಮನಗಳಿಂದ ಶಕ್ತರಾಗಿರುವವರೆಗೂ ಕೆಲಸ ಮಾಡುತ್ತಾ ಇರುವವರು ಇರುತ್ತಾರೆ. ಅಂತಹವರು ತಮ್ಮ ಸ್ವಂತದ ಕ್ಷೇತ್ರದಲ್ಲಿ ಮತ್ತು ಕೆಲವೊಮ್ಮೆ ಹೊರ ಊರುಗಳಿಗೆ ಪ್ರವಾಸ ಮಾಡಿ ಸಂಘದ ಕೆಲಸವನ್ನು ಸುದೃಢ ಹಾಗೂ ವಿಸ್ತಾರಗೊಳಿಸುವ ಸಲುವಾಗಿ ತಮ್ಮ ದೈನಂದಿನ ಕೆಲಸಕಾರ್ಯಗಳ ನಡುವೆ ಸಮಯ ಮೀಸಲಿರಿಸುತ್ತಾರೆ.

ಸಂಘದ ಕಾರ್ಯ ಬೆಳೆಯುತ್ತ ಬಂದಂತೆ, ಕಾರ್ಯದಲ್ಲಿ ತೊಡಗಿರುವ ಸ್ವಯಂಸೇವಕರೂ ವಯಸ್ಸಿನಿಂದ ಬೆಳೆಯುವುದು ಸ್ವಾಭಾವಿಕವೇ. ಅಂತಹ ಕಾರ್ಯಕರ್ತರಲ್ಲಿ ಕೆಲವರು - ತಮ್ಮ ವಯಸ್ಸು 50-60 ದಾಟಿದವರು - ವಾನಪ್ರಸ್ಥಿಗಳು ಎಂಬ ನಿಟ್ಟಿನಲ್ಲಿ ತಮ್ಮ ಪಾರಿವಾರಿಕ ಜವಾಬ್ದಾರಿಗಳಿಂದ ಬಿಡುಗಡೆ ಹೊಂದಿ ತಮ್ಮ ಪೂರ್ಣ ಸಮಯವನ್ನು ಸಂಘದ ಯೋಜನೆಗನುಗುಣವಾಗಿ ಕಾರ್ಯಕ್ಕೆ ವಿನಿಯೋಗಿಸಲು ಮುಂದೆ ಬರುತ್ತಿದ್ದಾರೆ.

ಸಮಾಜಕ್ಕಾಗಿ ಸಮಯ ಕೊಟ್ಟು ಪರಿಶ್ರಮ ಪೂರ್ವಕ ಕೆಲಸ ಮಾಡುವವರನ್ನು ಸರ್ವ ಸಾಮಾನ್ಯ ಜನರಿಂದಲೇ ಶಾಖೆಯ ಮೂಲಕ ರೂಪಿಸುವಂತಹ ಯೋಜನೆಯನ್ನು ಡಾಕ್ಟರ್

ಹೆಡಗೇವಾರರು ಮಾಡಿದುದು ಎಷ್ಟು ಸೊಗಸಾಗಿ ಸಫಲಗೊಳ್ಳುತ್ತದೆ ಎಂಬುದು ನಿಮಗೀಗ ಸ್ಪಷ್ಟಗೊಂಡಿರಬಹುದು. ಸಂಘದಲ್ಲಿನ ತರುಣ ಪ್ರಚಾರಕರ ಮತ್ತು ಸ್ಥಾನೀಯ ಕಾರ್ಯಕರ್ತರ ಮಾದರಿಯಲ್ಲೆ ತಮ್ಮಲ್ಲೂ ಕಾರ್ಯಕರ್ತರನ್ನು ರೂಪಿಸಲು ಅನ್ಯ ಕೆಲವು ಸಂಘಟನೆಗಳೂ ಈಗ ಆರಂಭಿಸಿರುವ ಪ್ರಯತ್ನದಲ್ಲಿ ಅಷ್ಟಿಷ್ಟು ಸಫಲತೆ ಕಾಣಲಾರಂಭಿಸಿದೆ. ಈ ಎಲ್ಲ ಕಾರ್ಯಕರ್ತರಲ್ಲೂ ಒಂದು ಗಮನೀಯ ವಿಶೇಷತೆಯಿದೆ. ಇವರಾರೂ ತಮ್ಮ ಪರಿಶ್ರಮಕ್ಕೆ ಪ್ರತಿಫಲವಾಗಿ ಹಣ, ಸನ್ಮಾನ, ಸ್ಥಾನ, ಪ್ರತಿಷ್ಠೆ ಇವಾವುದನ್ನೂ ಅಪೇಕ್ಷಿಸುವುದಿಲ್ಲ. ತಮ್ಮ ಹೆಸರಿನ ಪ್ರಸಿದ್ಧಿಯೂ ಅವರಿಗೆ ಬೇಕಾಗಿಲ್ಲ. ತಮ್ಮ ಸಹಕಾರಿ ಕಾರ್ಯಕರ್ತರಲ್ಲಿ ನಿರಂತರವಾಗಿ ಗುಣಗಳು ವೃದ್ಧಿಯಾಗಲಿ, ಅವರು ತಮಗಿಂತ ಹೆಚ್ಚು ಕರ್ತೃತ್ವಶಾಲಿಗಳಾಗಿ ಮುಂದುವರಿಯಲಿ ಎಂಬ ಉದ್ದೇಶದಿಂದಲೇ ಅವರೆಲ್ಲರೂ ಕಾರ್ಯನಿರತರಾಗಿರುತ್ತಾರೆ.

## ಶ್ರೀ ಗುರುದಕ್ಷಿಣಾ ಪದ್ಧತಿಯ ವಿಶೇಷತೆ

ಹೊಸ ಹೊಸ ಕಾರ್ಯಕರ್ತರನ್ನು ಬೆಳೆಸುವುದರ ಜತೆ ಶಾಖೆಗಳಿಗೆ ಹೊಸದಾಗಿ ಬರುವ ಸ್ವಯಂಸೇವಕರಲ್ಲಿ ಸಂಘಕಾರ್ಯಕ್ಕೆ ಅವಶ್ಯವಿರುವ ಗುಣಗಳು ಸರಿಯಾಗಿ ವಿಕಾಸಗೊಳ್ಳಬೇಕು ಎಂಬ ಸಲುವಾಗಿ ಡಾಕ್ಟರ್ ಹೆಡಗೇವಾರರು ಶಾಖಾ ಪದ್ಧತಿಯಲ್ಲಿ ಕೆಲವು ಮೌಲಿಕ ಸಂಗತಿಗಳನ್ನು ಜೋಡಿಸಿದರು. ಉದಾಹರಣೆಗೆ ಯಾವುದೇ ಒಂದು ಸಂಘಟನೆ ಚೆನ್ನಾಗಿ ನಡೆಯಬೇಕಾದಲ್ಲಿ ಅದರಲ್ಲಿ ಸದ್ಗುಣ ಮತ್ತು ಅನುಶಾಸನದ ಜತೆಯಲ್ಲಿ ಅದರ ಸದಸ್ಯರಲ್ಲಿ ಹಣಕಾಸಿಗೆ ಸಂಬಂಧಿಸಿದಂತೆ ಶುದ್ಧ ವ್ಯವಹಾರವೂ ಅನಿವಾರ್ಯವಾದುದು. ಅದಕ್ಕಾಗಿ ಡಾಕ್ಟರ್ ಹೆಡಗೇವಾರರು ಸಂಘದಲ್ಲಿ ಶುಲ್ಕ ಅಥವಾ ದಾನದ ಕಲ್ಪನೆಯನ್ನು ಇರಿಸದೆ, ಅದರ ಸ್ಥಾನದಲ್ಲಿ ಸಮರ್ಪಣೆಯ ದೃಷ್ಟಿಕೋಣವನ್ನು ಮುಂದಿರಿಸಿದರು.

ಇದರ ಸಲುವಾಗಿ ಶ್ರೀ ಗುರುದಕ್ಷಿಣೆಯ ಪದ್ಧತಿ ಆರಂಭವಾಯಿತು. ಭಗವಾಧ್ವಜವನ್ನು ತಮ್ಮ ಗುರುವಾಗಿರಿಸಿ ವ್ಯಾಸ ಪೂರ್ಣಿಮೆಯ (ಆಷಾಢ ಶುಕ್ಲ ಪೂರ್ಣಿಮೆ) ಶುಭದಿನದಂದು ಸ್ವಯಂಸೇವಕರು ಅದರ ಮುಂದೆ ತಮ್ಮ ಸಾಮರ್ಥ್ಯಕ್ಕನುಗುಣವಾಗಿ ದಕ್ಷಿಣೆಯನ್ನು ಸಮರ್ಪಿಸುತ್ತಾರೆ. ಇದನ್ನು ಆಧರಿಸಿಯೇ ಸಂಘದ ಎಲ್ಲ ಕೆಲಸಕಾರ್ಯಗಳು ನಡೆಯುತ್ತವೆ. ಈ ಪದ್ಧತಿಯಿಂದಾಗಿ ಸ್ವಯಂಸೇವಕರಲ್ಲಿ ಸ್ವಾವಲಂಬನೆಯ ಸಂಸ್ಕಾರ ದೃಢಗೊಳ್ಳುತ್ತದೆ. ಈ ದೃಷ್ಟಿಕೋನವನ್ನು ವಿವರಿಸುತ್ತ ಡಾಕ್ಟರ್ ಹೆಡಗೇವಾರರು ಸ್ವಯಂಸೇವಕರ ಬಳಿ, 'ನೋಡಪ್ಪ, ಒಬ್ಬ ವ್ಯಕ್ತಿ ಎಷ್ಟೇ ಬಡವನಿರಲಿ, ಅವನ ಮನೆಯವರು ತಮ್ಮಲ್ಲಿನ ಶುಭ ಅಥವಾ ಅಶುಭ ಪ್ರಸಂಗಗಳಲ್ಲಿ ಸಾರ್ವಜನಿಕರ ಮುಂದೆ ಭಿಕ್ಷೆಗಾಗಿ ಕೈಯೊಡ್ಡುವುದಿಲ್ಲ. ಎಷ್ಟೇ ಕಷ್ಟವಿರಲಿ, ಹೇಗೋ ಏನೋ ಅದನ್ನು ನಿಭಾಯಿಸುತ್ತಾರೆ. ಸಂಘಕ್ಕೆ ಸಂಬಂಧಿಸಿ ನಾವೂ ಅದೇ ರೀತಿ ಯೋಚಿಸಬೇಕು' ಎನ್ನುತ್ತಿದ್ದರು. ಈ ದೃಷ್ಟಿಕೋಣವೇ ಸಂಘದ ಎಲ್ಲ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಾಗ ಸ್ವಯಂಸೇವಕರ ವ್ಯವಹಾರದಲ್ಲೂ ಕಾಣುತ್ತಿದೆ.

## ನಿಷ್ಠೆ ವ್ಯಕ್ತಿಯ ಮೇಲಲ್ಲ, ಧ್ಯೇಯದ ಮೇಲೆ

ಹೀಗೆ ಗುರುಪೂಜೆಯ ಅನುಪಮ ಪದ್ಧತಿಯ ಮೂಲಕ ಡಾಕ್ಟರ್ ಹೆಡಗೇವಾರರು ಸಂಘದ ಸ್ವಯಂಸೇವಕರಲ್ಲಿ ವ್ಯಕ್ತಿನಿಷ್ಠೆಯ ಬದಲಾಗಿ ತತ್ವನಿಷ್ಠೆಯ, ಆದರ್ಶನಿಷ್ಠೆಯ ಸಂಸ್ಕಾರವನ್ನು ಬೆಳೆಸುವುದರಲ್ಲಿ ಸಫಲರಾದರು. ಅದಕ್ಕನುಗುಣವಾಗಿ ತನ್ನ ಸ್ವಂತದ್ದೇ ತೇಜಸ್ವೀ ಉದಾಹರಣೆಯನ್ನು ಅವರು ಸ್ವಯಂಸೇವಕರ ಮುಂದಿರಿಸಿದರು. ಅವರ ಮುಖದಿಂದ 'ನಾನು

ಸಂಘದ ಸಂಸ್ಥಾಪಕ ಎಂಬ ಶಬ್ದಗಳು ಎಂದೂ ಹೊರಡಲೇ ಇಲ್ಲ. ಸಂಘಕ್ಕೆ ಸಂಬಂಧಿಸಿದ ಯಾವುದೇ ನಿರ್ಣಯವಿರಲಿ, ಅದನ್ನು ನಿರ್ಧರಿಸುವ ಮೊದಲು ಅವರು ಸಹಕಾರಿಗಳ ಜತೆ ಚರ್ಚಿಸುತ್ತಿದ್ದರು. ಆ ನಿರ್ಣಯವನ್ನು ಕಾರ್ಯಕರ್ತರೇ ಸ್ವೀಕರಿಸಿದರು ಎನ್ನುತ್ತಿದ್ದರು ಮತ್ತು ಎಲ್ಲ ಸ್ವಯಂಸೇವಕರಿಂದ ಅಪೇಕ್ಷೆ ಪಡುವ ಪ್ರತಿಯೊಂದು ನಿಯಮವನ್ನು ತಾನು ಸ್ವತಃ ಕಠೋರವಾಗಿ ಅನುಸರಿಸುತ್ತಿದ್ದರು. 'ಸಂಘದಲ್ಲಿ ನಾಯಕ ಮತ್ತು ಸ್ವಯಂಸೇವಕ ಎಂಬಂತಹ ಭೇದವಿಲ್ಲ. ನಾವೆಲ್ಲರೂ ಸ್ವಯಂಸೇವಕರೆ' ಎನ್ನುತ್ತಿದ್ದರು. ಈಗಲೂ ಸಹ ಸಂಘದ ಅಥವಾ ಅನ್ಯ ಯಾವುದೇ ಸಹಕಾರಿ ಸಂಘಟನೆಯ ಎಷ್ಟೇ ದೊಡ್ಡ ಜವಾಬ್ದಾರಿಯುಳ್ಳ ಕಾರ್ಯಕರ್ತನಿರಲಿ, ಸಮಾಜದಲ್ಲಿ ಆತನ ಸ್ಥಾನಮಾನ ಏನೇ ಇರಲಿ, ಆತ 'ನಾನೊಬ್ಬ ಸ್ವಯಂಸೇವಕ' ಎನ್ನಿಸಿಕೊಳ್ಳುವುದರಲ್ಲಿ ಹೆಚ್ಚಿನ ಗೌರವದ ಅನುಭವ ಪಡೆಯುತ್ತಾನೆ. ಹೀಗಾಗಿ ಸಾಮಾನ್ಯ ಜನರಲ್ಲೂ 'ಸಂಘದ ಸ್ವಯಂಸೇವಕ' ಎಂದಾಗ ಒಂದು ವಿಶೇಷ ರೀತಿಯ ವಿಶ್ವಾಸದ ಹಾಗೂ ಗೌರವದ ಪ್ರತಿಮೆ ಮೂಡುತ್ತದೆ. ಶಾಖಾಪದ್ಧತಿಯಿಂದ ವಿಕಸಿತಗೊಂಡ ಹಲವಾರು ಉತ್ಕೃಷ್ಟ ಸಂಸ್ಕಾರಗಳ ಸತ್ಫಲ ಇದು. ಇದೆಲ್ಲವೂ ಡಾಕ್ಟರ್ ಹೆಡಗೇವಾರರು ತಮ್ಮ ಸ್ವಂತದ ಆಚರಣೆಯಲ್ಲಿ ಬಿತ್ತಿದ ಬೀಜದ ಫಲವೆಂಬುದನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲವಲ್ಲ.

## ವಿರೋಧದ ನಡುವೆಯೂ ಸಂಘದ ನಿರಂತರ ಬೆಳವಣಿಗೆ

ಇಲ್ಲಿನವರೆಗೆ ಸಂಘದ ಕತೆಯನ್ನು ಓದಿದ ಬಳಿಕ, ಈವರೆಗೆ ಸಂಘ ಬೆಳೆಯುತ್ತ ಬಂದಂತೆ, ಮುಂದೆಯೂ ಬೆಳೆಯುತ್ತಲೇ ಹೋಗುವುದು ಎಂದು ನಿಮಗೆ ಅವಶ್ಯವಾಗಿ ಅನಿಸಿರಬಹುದು. ಜತೆಯಲ್ಲಿ ಸಂಘದ ವಿಚಾರ, ಚಟುವಟಿಕೆಗಳನ್ನು ವಿರೋಧಿಸುವವರು ಯಾರೂ ಇಲ್ಲವೇ ಎಂಬ ಪ್ರಶ್ನೆಯೂ ನಿಮ್ಮಲ್ಲಿ ಮೂಡಿರಬಹುದು. ನಿಜ ಹೇಳಬೇಕೆಂದರೆ, ಸಂಘವು ತನ್ನ ಆರಂಭದಿಂದಲೂ ಅನೇಕ ವಿಧದ ಅಪಪ್ರಚಾರ ಹಾಗೂ ಕಡು ವಿರೋಧಗಳನ್ನು ಎದುರಿಸುತ್ತಲೇ ಬಂದಿದೆ. ಈ ಕತೆಯ ಆರಂಭದಲ್ಲೆ ಡಾಕ್ಟರ್ ಹೆಡಗೇವಾರರು ಎಂತಹ ಉಗ್ರದೇಶಭಕ್ತರಾಗಿದ್ದರು ಎಂಬುದನ್ನು ಹೇಳಿದೆಯಲ್ಲವೇ? ಹೀಗಾಗಿ ಆಗಿನ ಆಂಗ್ಲ ಸರಕಾರದ ಹದ್ದುಗಣ್ಣು ಸಂಘದ ಮೇಲೆ ಸದಾ ಇದ್ದುದು ಸ್ವಾಭಾವಿಕವೇ. ಸಂಘದ ಸ್ವಯಂಸೇವಕರ ಚಟುವಟಿಕೆಗಳ ಮೇಲೆ ನಿಷೇಧ ಹೊರಿಸಲು ಸರಕಾರದಿಂದ ಮೂರು ಬಾರಿ ಪ್ರಯತ್ನಗಳಾಗಿದ್ದವು. ಆದರೆ ಡಾಕ್ಟರ್ ಹೆಡಗೇವಾರ್ ಮತ್ತು ಶ್ರೀಗುರೂಜಿಯವರ ಕಾರ್ಯಕುಶಲತೆ ಮತ್ತು ಸಂಘಕ್ಕೆ ಜನಸಮರ್ಥನೆಯೂ ಇದ್ದ ಕಾರಣ ಈ ಪ್ರಯತ್ನಗಳೆಲ್ಲ ವಿಫಲಗೊಂಡಿದ್ದವು. ಭಾರತವು ಸ್ವತಂತ್ರವಾದ ಮೇಲೂ ವಿರೋಧವು ಕಡಿಮೆಯಾಗಲಿಲ್ಲ. 1948ರಲ್ಲಿ ಗಾಂಧೀಜಿಯವರ ಹತ್ಯೆಯ ನಂತರ ಮತ್ತು 1975-77ರ ತುರ್ತು ಪರಿಸ್ಥಿತಿಯಲ್ಲಿ ಸಂಘದ ಮೇಲೆ ನಿಷೇಧ ಹೇರಲಾಗಿತ್ತು. ಇತ್ತೀಚೆಗೆ 1992ರ ಕಾರಸೇವೆಯ ನಂತರವೂ ಒಮ್ಮೆ ನಿಷೇಧ ವಿಧಿಸಲಾಗಿತ್ತು. ಆದರೆ ಪ್ರತಿಬಾರಿಯೂ ಸರಕಾರಕ್ಕೆ ನಿಶ್ಶರ್ತವಾಗಿಯೇ ನಿಷೇಧವನ್ನು ರದ್ದುಪಡಿಸುವ ಅನಿವಾರ್ಯತೆ ಉಂಟಾಯಿತು. (1992ರ ನಿಷೇಧವು ನ್ಯಾಯಮಂಡಲಿಯ ಆದೇಶಕ್ಕನುಗುಣವಾಗಿ ರದ್ದಾಯಿತು). ಪ್ರತಿಬಾರಿಯೂ ಸಂಘವು ಅಗ್ನಿದಿವ್ಯವಾಗಿ ಇನ್ನೂ ಹೆಚ್ಚು ತೇಜಸ್ವಿಯಾಗಿ, ಶಕ್ತಿಶಾಲಿಯಾಗಿ ಮತ್ತು ಜನಪ್ರಿಯವಾಗಿ ಹೊರಹೊಮ್ಮಿತು.

## ಆರೋಪಿಸುತ್ತಿರುವವರು ಯಾರು?

ಸಂಘದ ವಿರುದ್ಧ ಈಗಲೂ ಸತತವಾಗಿ ಅಪಪ್ರಚಾರದ ಧಾಳಿ ನಡೆದಿದೆ. ಶಾಖೆಗಳ

ರೂಪದಲ್ಲಿ ಸಂಘವು ನಿರಂತರವಾಗಿ ಬೆಳೆಯುತ್ತಿರುವುದಲ್ಲದೆ, ರಾಜಕೀಯವನ್ನೊಳಗೊಂಡು ರಾಷ್ಟ್ರಜೀವನದ ಎಲ್ಲ ಕ್ಷೇತ್ರಗಳಲ್ಲೂ ಸಂಘದ ಪ್ರಭಾವ ಬೆಳೆಯುತ್ತಿರುವುದರಿಂದಾಗಿ ಸಂಘದ ಕುರಿತು ಅಪಪ್ರಚಾರವು ಬೆಳೆಯುವುದೂ ಸ್ವಾಭಾವಿಕವೇ. ಆದರೆ ಸಂಘ ಮತ್ತು ಇದಕ್ಕೆ ಸಂಬಂಧಿತ ಸಂಘಟನೆಗಳ ವಿರುದ್ಧ ವಿಧವಿಧದ ಆರೋಪ ಹೊರಿಸುತ್ತಿರುವವರು ಯಾರು? ಅವರೆಲ್ಲರೂ ರಾಜಕೀಯ ಮತ್ತು ಮತೀಯ ನಾಯಕರು, ಹಾಗೂ ವಿಶೇಷವಾಗಿ ಇಂಗ್ಲಿಷ್ ಭಾಷಾ ಪತ್ರಿಕೆಗಳು, ಕ್ರೈಸ್ತ ಪಾದ್ರಿಗಳು ಮೊದಲಾದವರು ಎಂಬುದು ಈಗಾಗಲೇ ನಿಮಗೂ ಗೊತ್ತಾಗಿರಬಹುದು. ಹಿಟ್ಲರನ ಬಳಿ ಗೋಬೆಲ್ ಎಂಬ ಓರ್ವ ಕುಖ್ಯಾತ ಪ್ರಚಾರ ಮಂತ್ರಿ ಇದ್ದ. 'ಸುಳ್ಳನ್ನು ನೂರು ಬಾರಿ ಹೇಳುತ್ತಲೇ ಇದ್ದಲ್ಲಿ ಅದೇ ಸತ್ಯವೆಂಬಂತೆ ಕಾಣುವುದು' ಎಂಬುದು ಆತನ ಪ್ರಚಾರದ ರೀತಿಯಾಗಿತ್ತು. ಸಂಘದ ಮೇಲೆ ಆರೋಪ ಹೊರಿಸುವವರೆಲ್ಲರೂ ಅವನ ನಿಷ್ಠಾವಂತ ಶಿಷ್ಯರೇ ಆಗಿರುವಂತೆ ಕಾಣುತ್ತದೆ.

## ಗಾಂಧಿ ಹತ್ಯೆಯ ಆರೋಪ – ಆಧಾರರಹಿತ

ಉದಾಹಣೆಗೆ ನೋಡಿ - ಗಾಂಧೀಜಿಯವರ ಹತ್ಯೆ ಮಾಡಿದ್ದುದು ಸಂಘ ಎಂಬ ಆರೋಪ. ಸ್ವತಃ ಸರದಾರ ಪಟೇಲರು ಪಂ. ನೆಹರು ಅವರಿಗೆ ದಿ. 27.2.1948ರಂದು ಬರೆದ ಪತ್ರದಲ್ಲಿ ಅಸಂದಿಗ್ಧವಾಗಿ ತಿಳಿಸಿರುವ ಮಾತು "ಗಾಂಧೀಜಿಯವರ ಹತ್ಯೆಯಲ್ಲಿ ಸಂಘದ ಯಾವುದೇ ಸದಸ್ಯರ ಕೈವಾಡವಿಲ್ಲ." ನಂತರ ನ್ಯಾಯಮೂರ್ತಿ ಆತ್ಮಚರಣರ ವಿಶೇಷ ನ್ಯಾಯಾಲಯದ ಮುಂದೆ ಸರಕಾರವು ಪ್ರಸ್ತುತ ಪಡಿಸಿದ ಆರೋಪ ಪತ್ರದಲ್ಲೂ ಸಂಘದ ಅಥವಾ ಅದರ ಯಾವನೇ ಸ್ವಯಂಸೇವಕನ ಹೆಸರು ಸಹ ಉಲ್ಲೇಖಿತವಾಗಿಲ್ಲ. ತದನಂತರ ವಿಶೇಷವಾಗಿ ನಿಯುಕ್ತವಾದ ಕಪೂರ್ ಆಯೋಗದ ವರದಿಯೂ ಸಂಘವನ್ನು ದೋಷಮುಕ್ತಗೊಳಿಸಿದೆ. 1977ರಲ್ಲಿ ಆಗಿನ ಪ್ರಧಾನಿ ಮುರಾರಜಿ ದೇಸಾಯಿ ಅವರು ಸಂಸತ್ತಿನಲ್ಲಿ ಇದೇ ಸಂಗತಿಯನ್ನು ಪುನರುಚ್ಚರಿಸಿದ್ದಾರೆ. 1948ರಲ್ಲಿ ಗಾಂಧಿ ಹತ್ಯೆಯ ಆರೋಪ ಹೊರಿಸಿ ಕೇಂದ್ರ ಸರಕಾರವು ಸಂಘದ ಮೇಲೆ ವಿಧಿಸಿದ ನಿಷೇಧವನ್ನು ನಿಶ್ಶರ್ತವಾಗಿ ವಾಪಸ್ ಪಡೆಯಬೇಕಾಯಿತು. ಈ ಸ್ಪಷ್ಟೀಕರಣವನ್ನು ಮುಂಬಯಿ ವಿಧಾನಸಭೆಯಲ್ಲಿ ಸರಕಾರದ ವತಿಯಿಂದಲೇ ಘೋಷಿಸಲಾಗಿದೆ.

ಈಗ ನೀವೇ ಹೇಳಿ, ಇಷ್ಟಾದರೂ ಸಂಘದ ಮೇಲೆ ಗಾಂಧಿ ಹತ್ಯೆಯ ಅದೇ ಹಳೇ ಆರೋಪವನ್ನು ಪುನಃ ಪುನಃ ಹೊರಿಸುವವರು ಗೋಬೆಲ್ಸ್‌ನ ಶಿಷ್ಯರು ಹೌದೇ ಅಥವಾ ಅಲ್ಲವೇ?

## ಪ್ರಮುಖರ ಅಭಿಪ್ರಾಯಗಳು

ಸಂಘವು ಜಾತೀಯ, ಮುಸಲ್ಮಾನ ಮತ್ತು ಕ್ರೈಸ್ತರ ವಿರೋಧಿ - ಇವು ಇದೇ ವಿಧದ ಇನ್ನೊಂದು ತಲೆಬುಡವಿಲ್ಲದ ಆರೋಪ. ಈ ವರೆಗೆ ದೇಶದಲ್ಲಿ ಹಲವು ಬಾರಿ ಜಾತೀಯ ದಂಗೆಗಳಾಗಿವೆ. ಅವುಗಳಿಗೆ ಸಂಬಂಧಿಸಿ ನಿಯುಕ್ತವಾದ ಪ್ರತಿಯೊಂದು ತಪಾಸಣಾ ಆಯೋಗವೂ ಸಂಘವನ್ನು ಎಲ್ಲ ಆರೋಪಗಳಿಂದ ಮುಕ್ತಗೊಳಿಸಿದೆ. ಕನ್ಯಾಕುಮಾರಿಯ ಸಮೀಪದ ಮಂಡೈಕಾಡುವಿನಲ್ಲಾದ ದಂಗೆಗೆ ಸಂಬಂಧಿಸಿ ನಿಯುಕ್ತವಾದ ನ್ಯಾಯಮೂರ್ತಿ ವೇಣುಗೋಪಾಲ ಆಯೋಗವು ತನ್ನ ವರದಿಯಲ್ಲಿ ಹಿಂದುಗಳನ್ನು ಕ್ರೈಸ್ತರಾಗಿ ಮತಾಂತರಿಸಿದುದರ ವಿರುದ್ಧ ನಡೆದ ಪ್ರತಿಕ್ರಿಯೆ ಅದು ಎಂದು ತಿಳಿಸಿದೆ. ಮತಾಂತರವನ್ನು ಪೂರಾ ನಿಲ್ಲಿಸಬೇಕು ಎಂಬ ಸಲಹೆಯನ್ನು ಸಹ ಈ ಆಯೋಗವು ಸರಕಾರಕ್ಕೆ ನೀಡಿದೆ.

ತುರ್ತುಪರಿಸ್ಥಿತಿಯಲ್ಲಿ ಸೆರಮನೆಯಿಂದ ಬಿಡುಗಡೆಹೊಂದಿ ಮುಂಬಯಿಯಿಂದ ಪಟ್ನಾಗೆ ಹೊರಡುವ ಮುನ್ನ ಮುಂಬಯಿಯ ಪ್ರತಿಷ್ಠಿತ ನಾಗರಿಕರ ಸಭೆಯಲ್ಲಿ ಜಯಪ್ರಕಾಶ ನಾರಾಯಣರು ಹೇಳಿದ ಮಾತಿದು.

"ಸಂಘ ಮತ್ತು ಜನಸಂಘದವರು ಫ್ಯಾಸಿಸ್ಟರು, ಜಾತೀಯವಾದಿಗಳು ಎಂಬ ಎಲ್ಲ ಆರೋಪಗಳು ಆಧಾರರಹಿತವಾದವು ಎಂದು ನಾನು ಆತ್ಮಸಾಕ್ಷಿಯಾಗಿ ಹೇಳುತ್ತೇನೆ. ದೇಶದ ಹಿತಕ್ಕಾಗಿ ಕೈಗೊಳ್ಳಲಾಗುವ ಯಾವುದೇ ಕಾರ್ಯಯೋಜನೆಯಲ್ಲಿ ಅದರಲ್ಲಿರುವವರು ಯಾಗಿಂತಲೂ ಹಿಂದಿರುವವರಲ್ಲ. ಅವರ ಮೇಲೆ ಇಂತಹ ಆರೋಪ ಹೊರಿಸುವುದು ಕೇವಲ ಕೆಸರೆರಚುವ ಪ್ರಯತ್ನವಲ್ಲದೆ ಇನ್ನೇನೂ ಅಲ್ಲ."

ಭಾರತದ ಪೂರ್ವ ರಾಷ್ಟ್ರಪತಿ ಡಾ|| ಜಾಕೀರ್ ಹುಸ್ಸೇನ್ ಅವರು 1949ರ ನವೆಂಬರ್ 20ರಂದು ಮುಂಗೇರ್‌ನ ಮಿಲಾದ್ ಮೆಹಫಿಲ್‌ನಲ್ಲಿ "ಸಂಘದವರು ಮುಸಲ್ಮಾನರನ್ನು ನಿಂದಿಸುತ್ತಾರೆ, ಅವರ ಮೇಲೆ ಆಕ್ರಮಣವೆಸಗುತ್ತಾರೆ ಇತ್ಯಾದಿ ಆರೋಪಗಳು ಪೂರಾ ಅಸತ್ಯವಾದವು. ಮುಸಲ್ಮಾನರು ಸಹ ಸಂಘದಿಂದ ಪರಸ್ಪರ ಪ್ರೀತಿ ಸಹಕಾರ ಮತ್ತು ಸಂಘಟನೆಯ ಕುಶಲತೆಯ ಪಾಠವನ್ನು ಕಲಿಯಬೇಕಾಗಿದೆ" ಎಂದು ಹೇಳಿದ್ದರು.

ಇದುವರೆಗೆ ಸಂಘವು ತನ್ನ ಯಾವುದೇ ಅಧಿಕೃತ ನಿರ್ಣಯದಲ್ಲಿ ಅಥವಾ ಭಾಷಣದಲ್ಲಿ, ಭಾರತದಲ್ಲಿ ಹಿಂದುಗಳಿಗೆ ಅನ್ಯ ನಾಗರಿಕರಿಗಿಂತ ಹೆಚ್ಚಿನ ವಿಶೇಷ ಅಧಿಕಾರಗಳು ಬೇಕಾಗಿವೆ ಎಂಬ ಬೇಡಿಕೆಯನ್ನು ಮುಂದಿರಿಸಿಲ್ಲ. ತದ್ವಿರುದ್ಧವಾಗಿ ಜಾತಿ ಅಥವಾ ಪಂಥದ ಆಧಾರದ ಮೇಲೆ ಯಾರಿಗೇ ಆಗಲಿ ಹೆಚ್ಚಿನ ಅಥವಾ ಕಡಿಮೆ ಅಧಿಕಾರಗಳನ್ನು ನೀಡುವುದು ಪ್ರಜಾತಂತ್ರಕ್ಕೆ ವಿರೋಧಿಯಾದುದು ಎಂಬುದನ್ನು ಒತ್ತಿ ಹೇಳುತ್ತಬಂದಿದೆ.

## ಮಾಜಿ ಪ್ರಧಾನ ನ್ಯಾಯಾಧೀಶರ ಸಾಕ್ಷ್ಯ

ಸಂಘವು ಸೆಕ್ಯುಲರಿಸಂಗೆ ವಿರುದ್ಧವಾದುದು ಎಂಬ ಆರೋಪವೂ ಆಗಾಗ ಕೇಳಿ ಬರುತ್ತದೆ. ಇದಂತೂ ಅತ್ಯಂತ ಹಾಸ್ಯಾಸ್ಪದವಾದುದು. ಕಾರಣವೆಂದರೆ ಮುಸಲ್ಮಾನರ ಆಳ್ವಿಕೆಯ ಕಾಲ ಬಿಟ್ಟರೆ, ಭಾರತದಲ್ಲಿ ಆಡಳಿತವು ಎಂದೂ ಯಾವುದೇ ಒಂದು ಪಂಥ ಅಥವಾ ಜಾತಿಯ ಅಂಕಿತಕ್ಕೊಳಗಾಗಿರಲಿಲ್ಲ. ರಾಜನಂತೆ ಪ್ರಜೆಗಳಿಗೂ ಇಲ್ಲಿ ತಂತಮ್ಮ ಧರ್ಮಕ್ಕನುಸಾರವಾಗಿ ಪೂಜಾಪದ್ಧತಿಗೆ ಮತ್ತು ಆಧ್ಯಾತ್ಮಿಕ ಸಾಧನೆಗೆ ಪೂರ್ಣ ಸ್ವಾತಂತ್ರ್ಯವಿತ್ತು. ತನ್ನ ರಾಜ್ಯದಲ್ಲಿನ ಎಲ್ಲ ಜಾತಿ ಪಂಥಗಳನ್ನು ಗೌರವಿಸಿ, ಅವುಗಳಿಗೆ ರಕ್ಷಣೆ ನೀಡುವುದು ಮತ್ತು ಯಾರ ಬಗ್ಗೆಯೂ ಭೇದಭಾವ ಅಥವಾ ಪಕ್ಷಪಾತವಿಲ್ಲದೆ ವ್ಯವಹರಿಸುವುದು ಇಲ್ಲಿ ರಾಜನ ಕರ್ತವ್ಯವೇ ಆಗಿತ್ತು. ಹಿಂದುಗಳ ಈ ಪರಂಪರೆಯನ್ನೇ 'ಸೆಕ್ಯುಲರಿಸಂ'ನ ಸರ್ವಶ್ರೇಷ್ಠ ಆದರ್ಶವಾಗಿ ಸಂಘವೂ ಸ್ವೀಕರಿಸಿದೆ.

1968ರ ಆಗಸ್ಟ್ 25ರಂದು ಬೆಂಗಳೂರಿನ ಶ್ರೀ ಗುರುದಕ್ಷಿಣಾ ಉತ್ಸವದ ಅಧ್ಯಕ್ಷತೆ ವಹಿಸಿದ ಭಾರತದ ಪೂರ್ವ ಪ್ರಧಾನ ನ್ಯಾಯಾಧೀಶರಾದ ಶ್ರೀ ಕೋಕಾ ಸುಬ್ಬರಾವ್ ಅವರು "ರಾಷ್ಟ್ರೀಯ ಸ್ವಯಂಸೇವಕ ಸಂಘವು ಈ ದೇಶದ ರಾಷ್ಟ್ರೀಯ ಚೈತನ್ಯವನ್ನು ಬಡಿದೆಬ್ಬಿಸುವ ಮಹಾಕಾರ್ಯದಲ್ಲಿ ತೊಡಗಿದೆ. ಇದು ನಮ್ಮ ರಾಷ್ಟ್ರದ ಏಕತೆ ಮತ್ತು ಅಖಂಡತೆಯನ್ನು ಕ್ಷೀಣಿಸದಂತೆ ಉಳಿಸುವ ಒಂದು ಶಕ್ತಿಶಾಲಿ ಸಾಧನವಾಗುವುದು ಎಂಬುದರಲ್ಲಿ ನನಗೆ ಪೂರಾ ವಿಶ್ವಾಸವಿದೆ" ಎಂದಿದ್ದಾರೆ.

ಇದೇ ಭಾಷಣದಲ್ಲಿ ಮುಂದೆ "ಸಂಘವು ಉದಾರ ಮತ್ತು ಸಮನ್ವಯವಾದಿ ಹಿಂದು ಸಂಸ್ಕೃತಿಯನ್ನು ಆಧರಿಸಿ ಹಿಂದುಗಳನ್ನು ಸಂಘಟಿಸಲು ತನ್ನನ್ನು ಸಮರ್ಪಿಸಿಕೊಂಡಿದೆ. ಹೀಗಾಗಿ ಇದರ ಮೇಲೆ ಸಂಘವು ಸೆಕ್ಯುಲರಿಸಂಗೆ ವಿರೋಧಿಯಾದ ಪ್ರಚಾರ ಮಾಡುತ್ತಿದೆ ಎಂಬ ಆರೋಪವನ್ನು ಹೊರಿಸುವುದು ಸರ್ವಥಾ ಅರ್ಥಹೀನವಾದುದು" ಎಂದು ಸಹ ಹೇಳಿದ್ದಾರೆ.

ಅಷ್ಟಾದರೂ ಕೆಲವು ರಾಜಕೀಯ ನಾಯಕರು ಸಂಘದ ಮೇಲೆ 'ಸೆಕ್ಯುಲರ್ ವಿರೋಧಿ' ಎಂಬ ಆರೋಪವನ್ನು ಏಕೆ ಹೊರಿಸುತ್ತಾರೆ? ಕಾರಣ ತುಂಬ ಸರಳ. ಹಿಂದುಗಳೀಗ ಎಚ್ಚರಗೊಂಡಿದ್ದಾರೆ. ಪ್ರತಿಯೊಂದು ರಂಗದಲ್ಲೂ ಈ ನಾಯಕರಿಂದ ತಮಗಾಗುತ್ತಿರುವ ಅಲಕ್ಷ್ಯ ಮತ್ತು ಉಪಹಾಸಗಳಿಂದಾಗಿ ಹಿಂದುಗಳ ಮನದಲ್ಲಿ ಈಗ ಸಿಟ್ಟು ಕಾಣಿಸತೊಡಗಿದೆ. ಅಹಿಂದುಗಳ ಸಗಟು ಮತಗಳ ಮೇಲೆ ಕಣ್ಣಿರಿಸಿ ಹಿಂದುಗಳನ್ನು ಅಲಕ್ಷಿಸುತ್ತಿರುವುದು ಮತ್ತು ಅಹಿಂದುಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವಂತಹ ಆ ರಾಜಕೀಯ ನಾಯಕರುಗಳ ಚುನಾವಣಾ ಕುತಂತ್ರಗಳು ಈಗೀಗ ಹಿಂದುಗಳಿಗೆ ಅರಿವಾಗುತ್ತಿದೆ. ಅಂತಹವರ ವಿರುದ್ಧ ಈಗ ಹಿಂದುಗಳು ಸಹ ಅವರಿಗರ್ಥವಾಗುವ ಭಾಷೆಯಲ್ಲೆ ಉತ್ತರಿಸಲು ಆರಂಭಿಸಿದ್ದಾರೆ. ಈ ರೀತಿಯಲ್ಲಿ ಹಿಂದುಗಳಲ್ಲಿ ಪ್ರಜಾತಂತ್ರದ ಮತ್ತು ರಾಷ್ಟ್ರಹಿತದ ಭಾವನೆಗಳನ್ನು ಎಬ್ಬಿಸುವಂತಹ ಸಂಘದ ಮೇಲೆ ಈ ಎಲ್ಲ ನಾಯಕರು ತಲೆಬುಡವಿಲ್ಲದ ಆರೋಪಗಳನ್ನು ಹೊರಿಸುತ್ತಿದ್ದಾರೆ. ಆದರೆ ಜನರು ಸಹ ಅವರ ತಾಜಾ ಮುಖವಾಡವನ್ನು ಈಗ ಗುರುತಿಸಿದ್ದಾರೆ ಮತ್ತು ಅವರೆಲ್ಲರನ್ನು ಢೋಂಗಿ ಸೆಕ್ಯುಲರ್‌ವಾದಿಗಳು ಎಂಬುದಾಗಿ ತಿಳಿಯಲು ಸಹ ಆರಂಭಿಸಿದ್ದಾರೆ.

## ಸಂಘ ಮತ್ತು ರಾಜಕಾರಣ - ಬೇರೆ ಬೇರೆ ಕ್ಷೇತ್ರಗಳು

ಕೆಲವರು ಸಂಘ ಮತ್ತು ಭಾಜಪಕ್ಕೆ ಸಂಬಂಧಿಸಿದಂತೆ ವಿಧವಿಧದ ಪ್ರಶ್ನೆಗಳನ್ನು ಕೇಳುವುದುಂಟು. ಈ ಕತೆಯ ಆರಂಭದಲ್ಲೆ ಹೇಳಿರುವಂತೆ, ಸಂಘದ ಸ್ವಯಂಸೇವಕರು ಶಾಖೆಯಲ್ಲಿ ಪಡೆದಿರುವ ಸಂಸ್ಕಾರಗಳ ಸಹಿತ ರಾಷ್ಟ್ರಜೀವನದ ಎಲ್ಲ ಕ್ಷೇತ್ರಗಳನ್ನು ಪ್ರವೇಶಿಸಿ, ಅಲ್ಲಿ ಹಿಂದುತ್ವದ ಸಂಸ್ಕಾರಗಳ ಪ್ರಭಾವ ಬೀರಲು ಪ್ರಯತ್ನಿಸುತ್ತಿರುವವರಾಗಿರುವುದರಿಂದ ಅವರಿಗೆ ಅಂತಹ ಕ್ಷೇತ್ರಗಳಲ್ಲಿ ರಾಜಕೀಯವೂ ಒಂದಾಗಿದೆ. ರಾಷ್ಟ್ರಜೀವನದ ಎಲ್ಲ ಕ್ಷೇತ್ರಗಳಲ್ಲೂ ಹಿಂದುತ್ವದ ಪ್ರಭಾವ ಬೀರಲು ಸಮಾನ ಕೊಂಡಿಯಾಗಿರುವವನು ಸ್ವಯಂಸೇವಕ. ಅಂತಹ ವಿವಿಧ ಕ್ಷೇತ್ರಗಳಲ್ಲಿ ಇರುವ ಸಂಘಟನೆಗಳಲ್ಲಿ ಭಾಜಪವೂ ಒಂದು. ರಾಜಕೀಯ ಕ್ಷೇತ್ರದಲ್ಲಿರುವ ಅದು ಒಂದು ಸ್ವತಂತ್ರವಾದ ಸಂಘಟನೆಯಾಗಿದೆ. ಕೇಂದ್ರದಲ್ಲಿ ಮತ್ತು ಯಾವ್ಯಾವ ರಾಜ್ಯಗಳಲ್ಲಿ ಭಾಜಪವು ಅಧಿಕಾರದಲ್ಲಿದೆಯೋ ಅಲ್ಲೆಲ್ಲ ತನ್ನ ನೀತಿಗಳನ್ನು ನಿರ್ಧರಿಸಲು ಅದು ಸ್ವತಂತ್ರವಾಗಿದೆ ಮತ್ತು ಅದೇ ರೀತಿಯಲ್ಲಿ ಆಗುತ್ತಲೂ ಇದೆ. ಅದರಲ್ಲಿ ಸಂಘದ ಯಾವುದೇ ಹಸ್ತಕ್ಷೇಪ ಇರುವುದಿಲ್ಲ. ಸಂಘವು ಸಮಾಜ ಮಾನಸಕ್ಕೆ ಯೋಗ್ಯ ದಿಕ್ಕು ನೀಡುವ ಸಲುವಾಗಿ ಸತತವಾಗಿ ಪ್ರಯತ್ನಿಸುತ್ತಿದೆ. ಭಾಜಪ ಹಾಗೂ ಭಾಜಪ ನೇತೃತ್ವದ ಸರಕಾರದ ಕ್ಷೇತ್ರ ಶಾಸನ ಮತ್ತು ಆಡಳಿತವಾಗಿದೆ. ಸಂಘದ ಕ್ಷೇತ್ರ ಸಾಮಾಜಿಕ ಮತ್ತು ಸಾಂಸ್ಕೃತಿಕವಾದುದು.

ಆದರೆ ನಿರಂತರವಾಗಿ ಬೆಳೆಯುತ್ತಿರುವ ಸಂಘದ ಶಕ್ತಿ, ಪ್ರಭಾವ ಮತ್ತು ಜನಪ್ರಿಯತೆಯಿಂದಾಗಿ ಅದರ ವಿರೋಧಿಗಳಲ್ಲಿ ಗಾಬರಿ ಹೆಚ್ಚುತ್ತಿರುವುದೇ, ಸಂಘವು ಎದುರಿಸುತ್ತಿರುವ ಎಲ್ಲ ವಿರೋಧಗಳ ಏಕಮಾತ್ರ ಕಾರಣವೆಂಬುದಾಗಿ ಸಂಘದ ಸ್ವಯಂಸೇವಕರಿಗೆ ಚೆನ್ನಾಗಿ ಗೊತ್ತು. ಸ್ವಾಮಿ ವಿವೇಕಾನಂದರು ಒಮ್ಮೆ ಹೇಳಿರುವ ಮಾತು : "ಪ್ರತಿಯೊಂದು ದೊಡ್ಡ ಕಾರ್ಯವೂ ನಾಲ್ಕು ಹಂತಗಳನ್ನು ದಾಟಬೇಕಾಗುತ್ತದೆ. ಉಪೇಕ್ಷೆ, ಉಪಹಾಸ, ವಿರೋಧ ಮತ್ತು

ಕೊನೆಯದಾಗಿ ವಿಜಯ" ಇವೇ ಆ ನಾಲ್ಕು ಹಂತಗಳು. ಸ್ವಯಂಸೇವಕರಿಗೆಲ್ಲ ಈ ಮಾತು ಚೆನ್ನಾಗಿ ತಿಳಿದಿದೆ. ಆದಕ್ಕಾಗಿ ಈಗ ಅಂತಿಮ ವಿಜಯದ ಮೇಲೆ ಅದಮ್ಯ ವಿಶ್ವಾಸದೊಂದಿಗೆ ಅವರೀಗ ಕಾರ್ಯನಿರತರಾಗಿದ್ದಾರೆ.

## ಹಿಂದುಗಳಾಗಿ ನಿಮ್ಮ ಬಳಿ ಪ್ರೀತಿಪೂರ್ವಕ ವಿನಂತಿ

ಅತ್ಯಂತ ಸಣ್ಣದರಲ್ಲಿ ಸಂಘದ ಈ ಕತೆಯನ್ನು ಹೇಳಲಾಗಿದೆ. ಇದನ್ನು ತಿಳಿದ ನಂತರ ಸಂಘದ ಕಾರ್ಯ ತೀವ್ರವೇಗದಲ್ಲಿ ಬೆಳೆಯದಿದ್ದಲ್ಲಿ ದೇಶದ ಮೇಲೆ ಇನ್ನೂ ಭಯಾನಕ ಆಪತ್ತುಗಳು ಬರಬಹುದು ಎಂದು ನಿಮಗೆ ಅಗತ್ಯವಾಗಿ ಅನಿಸಿರಬಹುದು. ಅದಕ್ಕಾಗಿ ಈ ಕಾರ್ಯವನ್ನು ತೀವ್ರಗತಿಯಿಂದ ಬೆಳೆಸಲು ನೀವು ಹಾಗೂ ನಿಮ್ಮಂತಹ ಇನ್ನೂ ಹೊಸ ಹೊಸ ಸಾವಿರಾರು ಮಂದಿ ಈ ಕಾರ್ಯದೊಂದಿಗೆ ಸಹಕಾರದ ಕೈ ಜೋಡಿಸಬೇಕಾಗಿದೆ. ಅದಕ್ಕಾಗಿ ಎಷ್ಟೇ ಆಗಲಿ - ರಾಮಾಯಣದಲ್ಲಿನ ಅಳಿಲ ಸೇವೆಯಂತೆ - ನಮ್ಮ ಹಿಂದು ಸಮಾಜಕ್ಕಾಗಿ, ನಮ್ಮ ಹಿಂದು ದೇಶಕ್ಕಾಗಿ, ಸಂಘಕ್ಕಾಗಿ, ಒಂದಿಷ್ಟು ಸಮಯ ಕೊಡುವುದು ಪ್ರತಿಯೊಬ್ಬ ಹಿಂದುವಿನ ಪರಮ ಕರ್ತವ್ಯ ಎಂದು ನಿಮಗೆ ಅವಶ್ಯವಾಗಿ ಅನಿಸುತ್ತಿರಬಹುದು. ಈಗ ನೀವು ಈ ಕತೆಯನ್ನು ಕೇಳುವವರು, ಓದುವವರು ಎಂಬುದಕ್ಕೆ ಮಾತ್ರ ಸೀಮಿತವಾಗಿರದೆ, ಈ ಕತೆಯನ್ನು ಇನ್ನೂ ಮುಂದುವರಿಸುವಂತಹ ಪಾತ್ರ ನಿಮ್ಮದಾಗುವಂತೆ ಯೋಚಿಸುವವರು ಆಗಿ, ಮುಂದೆ ನೀವೂ ಅದೇ ರೀತಿ ವ್ಯವಹರಿಸುವ ಓರ್ವ ಹಿಂದು ಬಂಧುವಾಗಬೇಕು ಎಂಬ ಸಲುವಾಗಿ ನಾನು ಪ್ರೀತಿಪೂರ್ವಕ ನಿಮ್ಮನ್ನು ವಿನಂತಿಸುವೆ.

## ಗಂಗಾಮಾತೆಯಂತೆ ಈ ಯಾತ್ರೆ

ಸಂಕ್ಷೇಪವಾಗಿ: ಈ ಕತೆಯಲ್ಲಿ ನೀವು ಮತ್ತು ನಾವು ಎಲ್ಲರೂ ಸಹಭಾಗಿಗಳು. ನಾವೆಲ್ಲರೂ ಕೂಡಿ ಮಾಡುವ ಈ ಸಮಾಜದ ನವೋತ್ಥಾನದ ಬೃಹತ್ ಪ್ರಯತ್ನದ ಕತೆ ಇದು. ಎಂದರೆ ನಮ್ಮೀ ತಾಯಿಸಮಾನವಾಗಿರುವ ಹಿಂದು ಸಮಾಜವನ್ನು ಜಾಗೃತ ಮತ್ತು ಸಂಘಟಿತಗೊಳಿಸಿ ನಮ್ಮ ಪ್ರಿಯ ತಾಯಿಭೂಮಿ ಭಾರತಮಾತೆಯನ್ನು ವೈಭವದ ಸರ್ವೋಚ್ಚ ಶಿಖರಕ್ಕೆ ಕೊಂಡೊಯ್ಯುವ ದಿಕ್ಕಿನಲ್ಲಿ ಹೆಜ್ಜೆಹೆಜ್ಜೆಯಾಗಿ ಮುನ್ನಡೆಯುವ ಕತೆ ಇದು. ಸ್ವಾಮಿ ವಿವೇಕಾನಂದರ ಶಿಷ್ಯೆ ಭಗಿನಿ ನಿವೇದಿತಾ ಹೇಳಿದ್ದು : "ಹಿಂದುಗಳು ಒಂದು ವಿಚಾರಕ್ಕಾಗಿ ಪ್ರತಿದಿನ ನಿಯಮಿತವಾಗಿ ಕೇವಲ ಹತ್ತು ನಿಮಿಷಕ್ಕಾದರೂ ಒಂದು ಕಡೆ ಸೇರಿ ಪ್ರಾರ್ಥನೆ ನಡೆಸಿದಲ್ಲಿ ಅದರಿಂದ ಪ್ರಚಂಡ ಶಕ್ತಿ ಹೊರಹೊಮ್ಮುವುದು."

1925ರಲ್ಲಿ ಡಾಕ್ಟರ್ ಹೆಡಗೇವಾರರು ಕಂಡಿರುವ ಆ ಐತಿಹಾಸಿಕ ಕನಸನ್ನು ನನಸುಗೊಳಿಸುವಂತಹ ಕತೆ ಇದು. ಆದರೆ ಇದೊಂದು ವಿಶಿಷ್ಟ ರೀತಿಯ ಕತೆಯಾಗಿದೆ. ಯಾವುದೇ ಕತೆಯಿರಲಿ, ಅದರ ಕೊನೆ ಎಂದಾದರೂ ಆಗುವಂತಹುದೇ. ಇದಾದರೋ ಅನಂತ ಕತೆಯಾಗಿದೆ. ಅನಂತ ಸಮಾಜದ ಅನಂತ ಕತೆ. ದೇವನದಿಯಂತೆ ಪುನಃಪುನಃ ಹೊಸದಾಗುತ್ತ ಹೋಗುತ್ತಿರುವ ಹಿಂದು ಸಮಾಜ ಪ್ರವಾಹದ ಅಖಂಡ ಜೀವಂತ ಕತೆಯಿದು. ಇದು ಸದಾ ಪ್ರವಹಿಸುತ್ತಲೇ, ಪ್ರವಹಿಸುತ್ತಲೇ ಇರುವುದು. ಇದರ ವೇಗ ನಿಲ್ಲದು. ಈ ಪಾವನ ಪ್ರವಾಹವು ಸಾಗರರೂಪಿ ಹಿಂದು ಸಮಾಜವನ್ನು ತನ್ನ ವಿಚಾರ ಹಾಗೂ ಸಂಸ್ಕಾರ ರೂಪದ ಮಡಿಲಲ್ಲಿ ಸೇರಿಸಿಕೊಳ್ಳುತ್ತ ಅದನ್ನು ಅತ್ಯಂತ ಶುದ್ಧ, ತೇಜಸ್ವಿ ಮತ್ತು ವಿಜಯಶ್ರೀಯಿಂದ ತುಂಬಿಸುತ್ತ ಸಂಪೂರ್ಣ ವಿಶ್ವವನ್ನೇ ಸುಖಮಯವಾಗಿ ಮಾಡುತ್ತಾ ಪೀಳಿಗೆಯಿಂದ ಪೀಳಿಗೆಯವರೆಗೆ ಪ್ರವಹಿಸುತ್ತಲೇ ಇರುವುದು.

# ಆರ್.ಎಸ್.ಎಸ್. ಗಣ್ಯರು ಕಂಡಂತೆ ...

***ಮಹಾತ್ಮಾ ಗಾಂಧಿ***, 16.9.1947, ಭಂಗಿ ಕಾಲೋನಿ, ದಿಲ್ಲಿ

"ಕೆಲವು ವರ್ಷಗಳ ಮೊದಲು, ಸಂಘದ ಸಂಸ್ಥಾಪಕರು ಬದುಕಿದ್ದಾಗ, ನಿಮ್ಮ ಶಿಬಿರಕ್ಕೆ ನಾನು ಹೋಗಿದ್ದೆ. ಅಲ್ಲಿ ನಿಮ್ಮ ಅನುಶಾಸನ, ಅಸ್ಪೃಶ್ಯತೆಯ ಲವಲೇಶವೂ ಇಲ್ಲದಿರುವುದು ಮತ್ತು ಕಠೋರ ಸರಳ ಜೀವನ ಕಂಡು ಭಾರೀ ಪ್ರಭಾವಿತನಾದೆ. ಸೇವೆ ಮತ್ತು ಸ್ವಾರ್ಥತ್ಯಾಗದ ಉನ್ನತ ಆದರ್ಶದಿಂದ ಪ್ರೇರಿತವಾಗಿರುವ ಯಾವುದೇ ಸಂಘಟನೆಯಾದರೂ ದಿನಕಳೆದಂತೆ ಹೆಚ್ಚೆಚ್ಚು ಶಕ್ತಿಶಾಲಿಯಾಗದೆ ಇರದು."

***ಶ್ರೀ ಜಯಪ್ರಕಾಶ ನಾರಾಯಣ್***, 3.11.1977, ಪಟ್ನಾ, ಸ್ವಯಂಸೇವಕರು ಮತ್ತು ಪ್ರೌಢ ನಾಗರಿಕರ ಮುಂದೆ

"ನವಭಾರತದ ನಿರ್ಮಾಣದ ಸವಾಲನ್ನು ಸ್ವೀಕರಿಸಿರುವ ಈ ಕ್ರಾಂತಿಕಾರಿ ಸಂಘಟನೆಯಲ್ಲಿ ನನಗೆ ತುಂಬ ಭರವಸೆಯಿದೆ. .. ಇಂದು ನಾವು ಕಾಣುತ್ತಿರುವ ನಮ್ಮ ಮುಂದಿನ ಸಾಮಾಜಿಕ ಪರಿವರ್ತನೆಯಲ್ಲೂ, ನೀವು ಅಗ್ರಪಂಕ್ತಿಯಲ್ಲಿದ್ದೀರಿ. ಸೇವೆ ಮತ್ತು ತ್ಯಾಗದ ಭಾವನೆಯಿಂದ ನಿಮ್ಮ ಹೃದಯ ತುಂಬಿದೆ ಎಂಬ ಬಗ್ಗೆ ನನಗೆ ಕಿಂಚಿತ್ತೂ ಸಂದೇಹವಿಲ್ಲ. ಬಡವರ ಬಗ್ಗೆ ನಿಮ್ಮ ಮನದಲ್ಲಿ ಅತ್ಯಂತ ಕರುಣೆಯ ಭಾವನೆಯಿದೆ ಹಾಗೂ ನಿಮ್ಮ ಆಚರಣೆಯೂ ಉದಾತ್ತವಾದುದು."

***ಡಾ॥ ಬಾಬಾಸಾಹೇಬ ಅಂಬೇಡ್ಕರ್***, ಮೇ 1939, ಪುಣೆಯ ಸಂಘ ಶಿಬಿರದಲ್ಲಿ

"ನಿಮ್ಮ ಸಮೀಪದ ಸ್ವಯಂಸೇವಕರ ಜಾತಿಯನ್ನು ತಿಳಿಯುವ ಕುತೂಹಲವೂ ಇಲ್ಲದೆ ಸಂಪೂರ್ಣವಾಗಿ ಸಮಾನತೆ ಹಾಗೂ ಬಂಧುತ್ವದೊಂದಿಗೆ ವ್ಯವಹರಿಸುವ ಇಲ್ಲಿನ ಸ್ವಯಂಸೇವಕರನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ."

***ಶ್ರೀ ಹಿಪ್ಪನ್ ರಾಯ್***, ವಾಸಿ ಬುಡಕಟ್ಟಿನ ನಾಯಕರು - 1982, ಜಬಲ್ಪುರದ (ಮಧ್ಯಪ್ರದೇಶ) ವನವಾಸಿ ಕಲ್ಯಾಣ ಆಶ್ರಮ ಶಿಬಿರದಲ್ಲಿ

"ಕೇವಲ ಇಲ್ಲಿ ಮಾತ್ರ ನಮ್ಮ ಮನಸ್ಸು ಮತ್ತು ಬುದ್ಧಿ ಇವೆರಡೂ ಪೂರ್ಣವಾಗಿ ಸಂತಸ ಮತ್ತು ಉದಾತ್ತ ಭಾವನೆಗಳಿಂದ ತುಂಬುವುದು ಅನುಭವವಾಗುತ್ತದೆ."

***ಸ್ವಾಮಿ ಚಿದ್ಭವಾನಂದ***, 1980, ತಿರುವೇಡಗಂನ ಕಾರ್ಯಕರ್ತರ ಶಿಬಿರ, ತಮಿಳುನಾಡು

"ನಮ್ಮ ಮಾತೃಭೂಮಿಯ ವೈಭವ ಮತ್ತು ಸಂಪೂರ್ಣ ಮಾನವತೆಯ ಉದ್ಧಾರಕ್ಕಾಗಿ ಸಾಕ್ಷಾತ್ ಭಗವಂತನೇ ಈ ಸಂಘಟನೆಯನ್ನು ಸೃಷ್ಟಿಸಿದ್ದಾನೆ. ಸಂಘದಲ್ಲಿ ನೀವು ಪಡೆಯುವ ಶಿಕ್ಷಣ ಮತ್ತು ಸಂಸ್ಕಾರ, ಸಂಪೂರ್ಣವಾಗಿ ಸ್ವಾಮಿ ವಿವೇಕಾನಂದರು ನಮ್ಮ ದೇಶದ ತರುಣರಿಗೆ ಯಾವುದು ಬೇಕೆಂದು ಕನಸು ಕಂಡಿದ್ದರೋ, ಅದೇ ಆಗಿದೆ."

**ರಾಷ್ಟ್ರ ಜಾಗರಣ ಅಭಿಯಾನ**